P 16

ಪ್ರವೇಶಧನವಿಲ್ಲ



# ಚಂದಮಾಮ ಕ್ಯಾಮಲ್

## ಬಣ್ಣಹಾಕುವ ಸ್ಪರ್ಧೆ

**ಗೆಲ್ಲಿರಿ ಈ ಬಹುಮಾನಗಳನ್ನು**
**ಕ್ಯಾಮಲ್**

1ನೆಯ ಬಹುಮಾನ ರೂ. 15/-
3 ಎರಡನೆಯ ಬಹುಮಾನಗಳು ರೂ. 10/-
10 ಮೂರನೆಯ ಬಹುಮಾನಗಳು ರೂ. 5/-
10 ಪ್ರಮಾಣ ಪತ್ರಗಳು

September 84 (16)

ಈ ಸ್ಪರ್ಧೆಯಲ್ಲಿ ಕೇವಲ 12 ವರ್ಷಗಳ ವರೆಗಿನ ವಯಸ್ಸಿನ ಮಕ್ಕಳು ಭಾಗವಹಿಸಬಹುದು. ಮೇಲೆ ಕಾಣಿಸಿದ ಚಿತ್ರಕ್ಕೆ ಸಂಪೂರ್ಣವಾಗಿ ಕ್ಯಾಮೆಲ್ ಬಣ್ಣಗಳಿಂದ ಬಣ್ಣ ಕೊಡಿರಿ ಮತ್ತು ಅದನ್ನು ಈ ವಿಳಾಸಕ್ಕೆ ಕಳಿಸಿರಿ :
ಪೋಸ್ಟ್ ಬಾಕ್ಸ್ ನಂ. 11501, ನರಿಮನ್ ಪಾಯಿಂಟ್ ಪೋಸ್ಟ್ ಆಫೀಸ್, ಬೊಂಬಾಯಿ 400 021.

ನಿರ್ಣಾಯಕರ ನಿರ್ಣಯವೇ ಅಂತಿಮ ನಿರ್ಣಯವಾಗುವುದು ಮತ್ತು ಎಲ್ಲರೂ ಅದಕ್ಕೆ ಬದ್ಧರಾಗುವರು. ಪತ್ರವ್ಯವಹಾರ ವನ್ನು ಮಾಡಲಾಗುವುದಿಲ್ಲ. ಕೂಪನನ್ನು ಇಂಗ್ಲಿಷ್‌ನಲ್ಲಿ ಮಾತ್ರ ತುಂಬಿರಿ.

Name: .................................................. Age: ....................

Address: ..................................................

..................................................

ಪ್ರವೇಶಪತ್ರಗಳನ್ನು ಕಳುಹಿಸುವ ಕೊನೆಯ ತಾರೀಕು: 30-9-1984

**CONTEST NO. 38**

...ಚುಕ್ಕೆ ಗೆರೆಯ ಉದ್ದಕ್ಕೂ ಕತ್ತರಿಸಿರಿ...



# ಚಂದಮಾಮ

ಸೆಪ್ಟೆಂಬರ್ 1984



## ಈ ಸಂಚಿಕೆಯಲ್ಲಿ






ಬಿಡಿ ಪ್ರತಿ ರೂ. ೨-೦೦

ವಾರ್ಷಿಕ ಚಂದಾ ರೂ. ೨೪.೦೦

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

ಮಾನವಲೋಕದ ವ್ಯವಹಾರದಲ್ಲಿ ಹಣವು ಹೊರಗಿನ ಜೀವದಂತೆ ಇರುವಂತಹದು. ನ್ಯಾಯದ ಗೆರೆ ತಪ್ಪಿದರೆ ಹಣವೇ ಅನರ್ಥ ಕಾರಿಯಾಗುತ್ತದೆ. ಅದೇ ಹಣವು ವಿಪರೀತವಾಗಿದ್ದುಬಿಟ್ಟರೆ ಎಂತಹ ವಿದ್ವಾಂಸನನ್ನಾದರೂ ವಕ್ರ ತಿರುಗಿಸಿ, ಘನ ಘೋರ ಪರಿಣಾಮಕ್ಕೆ ಒಯ್ಯುತ್ತದೆ. ಜಡ ಸೋಮಾರಿಗೆ ಆಶೆ ಕೆರಳಿಸಿ, ಚುರುಕು ಬರಿಸಿ ಕಳ್ಳತನಕ್ಕೆ ಪ್ರೇರೇಪಿಸಿ ಬಿಡುತ್ತದೆ, ಬುದ್ಧಿವಂತ ನಾದವನೇ ಹಣವನ್ನು ಸದ್ವಿನಿಯೋಗ ಮಾಡುತ್ತಾನೆ. ಇವು ಗಳನ್ನು ಉದಹರಿಸುವ ಮೂರು ಕಥೆಗಳು ಈ ಸಂಚಿಕೆಯಲ್ಲಿವೆ,

## ಅಮರವಾಣಿ

ಪ್ರಾಜ್ಞಸ್ತು ಲಭತೇ ಜ್ಞಾನಂ ನ ಜಡೋ ಗುರು ಬೋಧನಾತ್
ಮುಕುರೇ ದೃಶ್ಯತೇ ಬಿಂಬಂ ನ ಕದಾಪಿ ಮೃದಾಂ ಚಯೇ

ಗುರುಗಳು ಬೋಧಿಸುವುದನ್ನು ಬುದ್ಧಿಮತನಾದವನು ಗ್ರಹಿಸಿ ಜ್ಞಾನ ಪಡೆಯುವನು. ಮೂರ್ಖನಿಂದಾಗದು. ಪ್ರತಿಬಿಂಬವು ಕನ್ನಡಿಯಲ್ಲಿ ಕಾಣುವುದೇ ಹೊರತು ಮಣ್ಣುಗಟ್ಟಿಯಲ್ಲಿ ಅಲ್ಲ.


ಸಂಪುಟ: ೭೩. ಸೆಪ್ಟೆಂಬರ್ '೮೪ ಸಂಚಿಕೆ: ೩.

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦




# ಚಂದಮಾಮನ ಹರಟೆ



## ರೆಕ್ಕೆಗಳ ಹಡಗು

ಅಮೆರಿಕಾದಲ್ಲಿ ವಿಸ್‌ಕೊನ್ಸಿನ್ ವಿಶ್ವವಿದ್ಯಾಲಯಕ್ಕೆ ಸೇರಿದವರು ಇತ್ತೀಚೆಗೆ ಒಂದು ರೆಕ್ಕೆಗಳ ಹಡಗನ್ನು ರೂಪಿಸಿದರು. ನೀರಿನಲ್ಲಿ ಮೀನಿನ ಹಾಗೆ ರೆಕ್ಕೆಗಳನ್ನು ಆಡಿಸುತ್ತಾ ಮುಂದೆ ಮುಂದೆ ಸಾಗುತ್ತದೆ ಆ ಹಡುಗು !

## ಕಂಠಸ್ವರದಿಂದ ರೋಗನಿದಾನ

ನಾಡಿಯನ್ನು ಹಿಡಿದು ರೋಗ ನಿದಾನ ಮಾಡುವುದು ನಮ್ಮ ದೇಶದಲ್ಲಿ ಬಹಳ ಕಾಲದಿಂದ ವಾಡಿಕೆಯಲ್ಲಿದೆ. ಈಗ ಸೋವಿಯೆಟ್ ರಷ್ಯಾಕ್ಕೆ ಸೇರಿದ ಕೆಲವರು ಸಂಶೋಧಕರು, ಒಬ್ಬನ ಕಂಠಸ್ವರದ ಲಕ್ಷಣಗಳನ್ನು ಪರಿಶೀಲಿಸಿ, ಆ ಮನುಷ್ಯನ ಆರೋಗ್ಯ ಪರಿಸ್ಥಿತಿಯನ್ನು ತಿಳಿದುಕೊಳ್ಳುವ ನೂತನ ವಿಧಾನವನ್ನು ಕಂಡು ಹಿಡಿದಿದ್ದಾರೆ !





## ವೀಡಿಯೋ ಕ್ರೀಡೆಗಳು ತರುವ ಅಪಾಯ !

ದಿನದಿನಕ್ಕೂ ಹೆಚ್ಚಾಗುತ್ತಿರುವ ವೀಡಿಯೋ ಗೇಮ್ಸ್‌ಗಳಿಂದ ಅನೇಕ ಶಾರೀರಕ' ಮಾನಸಿಕ ರೋಗಗಳು ಬರುತ್ತವೆಂದು ಸಂಶೋಧಕರ ದೃಷ್ಟಿಗೆ ಬಂದಿದೆ. ಈ ವೀಡಿಯೋ ಕ್ರೀಡೆಗಳು ಅನೇಕರಿಗೆ ಚಿತ್ತಭ್ರಮೆಯನ್ನು ಬರಿಸುವುದಷ್ಟೇ ಅಲ್ಲದೆ, ಕೆಲವರಿಗೆ ಮೂರ್ಛೆ ವ್ಯಾಧಿಯನ್ನೂ ತರಿಸುವ ಅಪಾಯವಿದೆ ಎಂದು ಕೂಡಾ ಸಂಶೋಧಕರ ಅಭಿಪ್ರಾಯವಾಗಿದೆ.

## ನಿಮಗೆ ಗೊತ್ತೇ?

೧. ಭಾರತ ದೇಶದಲ್ಲಿ ಎತ್ತರವಾದ ಜಲಪಾತವು ಯಾವುದು ?

೨. ಹಿಮಾಲಯಾ ಪಾದತಲದಲ್ಲಿ ಬೆಟ್ಟಗಳ ನಡುವೆ ಬೆಳಗುವ ಹಿಂದುಗಳ ಪವಿತ್ರ ಕ್ಷೇತ್ರವು ಯಾವುದೆಂದು ನಿಮಗೆ ಗೊತ್ತಿದೆಯೇ ?

೩. ಅಹ್ಮದಾಬಾದನ್ನು ಹೊಂದಿಕೊಂಡು ಪ್ರವಹಿಸುವ ನದಿ ಯಾವುದೆಂದು ತಿಳಿದಿದೆಯೇ ?

೪. ನಮ್ಮ ದೇಶದಲ್ಲಿ ವೈಶಾಲ್ಯತೆಯಲ್ಲಿ ದೊಡ್ಡದಾದ ರಾಷ್ಟ್ರವು ಯಾವುದೆಂದು ನಿಮಗೆ ಗೊತ್ತೇ ?

೫. ನಮ್ಮ ದೇಶದಲ್ಲಿ ವಿಕ್ಟೋರಿಯಾ ಸ್ಮಾರಕ ಪ್ರದರ್ಶನ ಶಾಲೆ ಎಲ್ಲಿರುವುದೆಂದು ಹೇಳಬಲ್ಲಿರಾ ?

(ಉತ್ತರ ೬೪ ನೇ ಪುಟದಲ್ಲಿ)



# ಕಥೆಗಳ ಹಾವಳಿ

ಒಂದು ಊರಿನಲ್ಲಿ ಸಾಂಬಯ್ಯನೆಂಬವನಿಗೆ ಯಾರಿಗಾದರೂ ಕಥೆ ಹೇಳುವುದೆಂದರೆ ಬಹಳ ಉತ್ಸಾಹ. "ಕಥೆ ಕೇಳು, ಬಾರೊ!" ಎಂದು ತನ್ನ ಮೊಮ್ಮಗ ರಾಜುವನ್ನು ಕರೆದು ಕೂಡಿಸಿಕೊಳ್ಳುವನು. ಆದರೆ ರಾಜುಗೆ ಕಥೆಗಳ ಮೇಲೆ ಆಸಕ್ತಿ ಏನಿರಲಿಲ್ಲ. ಆಟ ಆಡುತ್ತಾ, ಹೊತ್ತು ಕಳೆಯುವುದರಲ್ಲೇ ಅವನ ಆಸಕ್ತಿ ಪೂರಾ. "ಯಾವಾಗಲೂ ಎಂಥ ಆಟ! ಬಾ ಇಲ್ಲಿ. ಅದ್ಭುತವಾದ ಕಥೆ ಹೇಳ್ತೀನೆ" ಎಂದು ಸಾಂಬಯ್ಯ ಅವನನ್ನು ಕರೆಯುವನು. ಕಥೆ ಕೇಳುತ್ತಿದ್ದರೂ ಅವನ ಮನಸ್ಸು ಆಟದ ಕಡೆಗೇ ಎಳೆಯುತ್ತಿತ್ತು. ಒಂದೊಂದು ಸಾರಿ ಸಾಂಬಯ್ಯ ಮೊಮ್ಮಗನನ್ನು ಗಟ್ಟಿಯಾಗಿ ಹಿಡಿದು ಕುಳ್ಳಿರಿಸಿ ಕಥೆ ಹೇಳಲು ಪ್ರಾರಂಭಿಸುವನು. ಅವನು ಸ್ವಲ್ಪ ಲಕ್ಷ್ಯ ತಪ್ಪಿದರೆ ಸಾಕು, ರಾಜು ಅಲ್ಲಿಂದ ಪರಾರಿಯಾಗಿಬಿಡುವನು.

ಕಥೆ ಕೇಳುವವರಿಗೆ ಆಸಕ್ತಿ ಹುಟ್ಟಬೇಕೆಂದು ಸಾಂಬಯ್ಯ ಬಹಳ ಪ್ರಯತ್ನ ಮಾಡುತ್ತಿದ್ದನು. ತನ್ನ ಮೊಮ್ಮಗನು ತನ್ನ ಹತ್ತಿರ ಕುಳಿತು ಕಥೆ ಕೇಳಬೇಕೆಂಬ ಉದ್ದೇಶದಿಂದ ಮಿಠಾಯಿ, ಚಕ್ಕುಲಿ, ಉಂಡೆ ಮುಂತಾದ ತಿಂಡಿಗಳನ್ನು ಕೂಡ ತನ್ನ ಹತ್ತಿರ ಇಟ್ಟುಕೊಳ್ಳುತ್ತಿದ್ದನು. ಆದರೂ ರಾಜು ಕಥೆ ಕೇಳಲು ಇಷ್ಟವಿಲ್ಲದೆ ಓಡಿಯೇ ಹೋಗುವನು. ಎಲ್ಲಿ ಸಾಂಬಯ್ಯ ಕಥೆ ಕೇಳಲು ಕರೆಯುವನೋ ಎಂದು ಹೆದರಿ ತಪ್ಪಿಸಿಕೊಳ್ಳುತ್ತಲೂ ಇದ್ದನು.

ಸಾಂಬಯ್ಯನಿಗೆ ತಾನು ಕಥೆ ಹೇಳುವುದು ಏಕೆ ಕೇಳಲು ಇಷ್ಟವಿಲ್ಲವೆಂದು ಏನೋ ಸಂದೇಹಪಟ್ಟು, ಹೆಂಡತಿಯನ್ನೂ, ಮಗನನ್ನೂ, ಸೊಸೆಯನ್ನೂ ನೋಡಿ, "ನಾನು ಕಥೆಗಳನ್ನು ಹೇಳುವಾಗ ನಿಮ್ಮ ಕಿವಿಗೂ ಸ್ವಲ್ಪ ಸ್ವಲ್ಪ ಬೀಳುತ್ತದಷ್ಟೆ? ಕೇಳಲಿಕ್ಕೆ ಬೇಸರ ಬರುತ್ತದೇನು? ಈಗ ಸ್ವಲ್ಪ ಕೂತು, ಒಂದು ಕಥೆ ಕೇಳಿರಿ" ಎಂದು ಅವರಲ್ಲಿ ಒಬ್ಬೊಬ್ಬರನ್ನು ಕರೆದು ತನ್ನ ಹತ್ತಿರ ಕುಳ್ಳಿರಿಸಿಕೊಂಡು ಕಥೆ ಹೇಳುವನು.

ಅಲ್ಲಿ ದೊಡ್ಡವರಿಗೆ ಕಥೆ ಕೇಳುವ ಆಸಕ್ತಿ ಇರಲಿಲ್ಲ. ಆದರೂ ಅವರು ದಾಕ್ಷಿಣ್ಯಪಟ್ಟು, ಕಥೆಯನ್ನು ಕೇಳಿ ಅಭಿಪ್ರಾಯ ಹೇಳುವರು.

"ಬಹಳ ಚೆನ್ನಾಗಿದೆಯಲ್ಲಾ ನಿಮ್ಮ ಕಥೆ! ಕಣ್ಣಿಗೆ ಕಟ್ಟುವ ಹಾಗೆ ಹೇಳುತ್ತೀರಿ. ನಮ್ಮಂಥವರಿಗೇ ಇನ್ನೂ ಕೇಳಬೇಕೆಂದಿರುವಾಗ ರಾಜುಗೆ ಏಕೆ ಇಷ್ಟ

ಜಿ. ಆರ್. ಲಕ್ಷ್ಮಿ



ವಿಲ್ಲವೋ!" ಎಂದು ಅವರು ಹೊಗಳುತ್ತಿದ್ದರು. ಆಗ ಸಾಂಬಯ್ಯ ಆ ಮಾತನ್ನೇ ಹಿಡಿದುಕೊಂಡು, "ಹಾಗಾದರೆ ನೀವೇ ಕುಳಿತು ನನ್ನ ಕಥೆ ಕೇಳಿರಿ. ನಿಮ್ಮ ಕೆಲಸಗಳಿಗೆ ತೊಂದರೆಯಾಗದ ಹಾಗೆ ನಾನು ಕಥೆ ಹೇಳುತ್ತೇನೆ" ಎನ್ನುವನು.

ಆಮೇಲೆ ಕಥೆ ಹೇಳುವ ಹುಚ್ಚಿನ ಸಾಂಬಯ್ಯ, ತನ್ನ ಹೆಂಡತಿ ಬತ್ತ ಹೊಸೆಯುತ್ತಾ ಕುಳಿತಿದ್ದರೆ ಅವಳ ಹತ್ತಿರ ಕುಳಿತು ಕಥೆ ಹೇಳುವನು. ಸೊಸೆ ಅಡಿಗೆ ಮಾಡುತ್ತಿರುವಾಗ ಅಲ್ಲಿ ಕುಳಿತು ಕಥೆ ಹೇಳುವನು. ಮಗನು ತೋಟದಲ್ಲಿ ಮಣ್ಣು ಕೆದರುತ್ತಿರುವಾಗ ಅವನ ಕಿವಿಯನ್ನೂ ಕಥೆಯಿಂದ ತುಂಬಿಸುವನು ಸಾಂಬಯ್ಯ.

ಅವರಿಗೆಲ್ಲ ಸಾಂಬಯ್ಯನ ಕಥೆಗಳದೊಂದು ಕಾಟವೇ ಆಯಿತು. ಈ ಕಾಟದಿಂದ ಬಿಡುಗಡೆಯಾಗಲು ಅವರು ರಾಜುವನ್ನು ಹಿಡಿದು ಅಜ್ಜನ ಮುಂದೆ ಕೂಡಿಸಿ, ಕಥೆಗಳ ಹಾವಳಿಯಿಂದ ತಪ್ಪಿಸಿಕೊಳ್ಳುತ್ತಿದ್ದರು.

ಹೀಗೆ ಕೆಲವು ದಿನಗಳು ಸಾಗಿದ ಮೇಲೆ ರಾಜು ಸಾಂಬಯ್ಯ ತಾತನೊಂದಿಗೆ ಒಂದು ಒಪ್ಪಂದಕ್ಕೆ ಬಂದನು. ಆ ಪ್ರಕಾರ ಅವನು ತಾತನ ಹತ್ತಿರ ಒಂದೇ ಒಂದು ಕಥೆ ಮಾತ್ರ ಕೇಳುತ್ತಾನೆ. ಆಮೇಲೆ ಅವನನ್ನು ಆಡಲಿಕ್ಕೆ ಬಿಟ್ಟುಬಿಡಬೇಕು.

ಸಾಂಬಯ್ಯ ಇದಕ್ಕೆ ಒಪ್ಪಿಕೊಂಡರೂ ತನ್ನ ಬುದ್ಧಿವಂತಿಕೆಯಿಂದ ಮೊಮ್ಮಗನಿಗೆ ಮೋಸಮಾಡುತ್ತಿದ್ದನು. ಒಂದೊಂದು ಸಾರಿ ಬಹಳ ದೊಡ್ಡ ಕಥೆಯನ್ನು ಹೇಳುವನು. ಅದು ಬೇಗದಲ್ಲಿ ಮುಗಿಯದಿರುವುದನ್ನು ನೋಡುವಾಗ ರಾಜುಗೆ ಅಳು ಬರುತ್ತಿದ್ದಿತು. ಮತ್ತೊಂದುಸಾರಿ ನಾಲ್ಕೈದು ಚಿಕ್ಕ ಚಿಕ್ಕ ಕಥೆಗಳನ್ನು ಒಂದಕ್ಕೊಂದು ಕೂಡಿಸಿಕೊಂಡು ಹೋಗಿ ಒಂದೇ ಕಥೆಯ ಹಾಗೆ ಹೇಳುತ್ತಿದ್ದನು. ಇದರಿಂದ ರಾಜು ಆಡಲು ಹೋಗಬೇಕಾದರೆ ತಾತ ಹೇಳುವ ಕಥೆ ಮುಗಿಯಲೇ ಬೇಕಾಗಿತ್ತು, ಪಾಪ!

ಹೀಗಿರುವಾಗ ಆ ಊರಿಗೆ ಒಬ್ಬ ಹೊಸ ಹುಡುಗ ಬಂದನು. ಅವನ ಮೇಲೆ ರಾಜುಗೆ ತುಂಬ ಇಷ್ಟವಾಯಿತು. ಆದರೆ ರಾಜು ತಡವಾಗಿ ಆಟಕ್ಕೆ ಬರುವುದನ್ನು ನೋಡಿ, "ನೀನು ಇಷ್ಟು ತಡವಾಗಿ ಏಕೆ ಬರುತ್ತಿ? ಸ್ವಲ್ಪ ಬೇಗ ಬಂದರೆ ಹೆಚ್ಚು ಹೊತ್ತು ಆಡಬಹುದಿತ್ತು!" ಎಂದನು ಹೊಸ ಹುಡುಗ.

ಆಗ ರಾಜು ಅವನೊಂದಿಗೆ ತನ್ನ ತಾತಯ್ಯ ಹೇಳುವ ಕಥೆಗಳ ಸಮಾಚಾರವನ್ನು ಹೇಳಿದನು.

ಅದನ್ನು ಕೇಳಿ ಆ ಹುಡುಗ ಕುತೂಹಲದಿಂದ, "ನಿಮ್ಮ ತಾತಯ್ಯ ಕಥೆ ಹೇಳುವವರೋ? ಕಥೆ ಕೇಳುವುದೆಂದರೆ ನನಗೆ ಬಹಳ ಇಷ್ಟ!" ಎಂದನು.

"ಹಾಗಾದರೆ ನೀನು ಬಂದು ತಾತನ ಹತ್ತಿರ ಕೂತುಕೋ. ನಾನು ತುಂಬಾ ಕಥೆ ಕೇಳಿಯಾಯಿತು. ನನ್ನಷ್ಟಕೆ ಆಡಿಕೊಂಡಿರುತ್ತೇನೆ" ಎಂದನು ರಾಜು, ಇವನಿಂದ ತನಗೆ ಬಿಡುಗಡೆ ಬಂದೀತೆಂಬ ಆಸೆಯಿಂದ.

"ಹಾಗೆಯೇ ಮಾಡುತ್ತೇನೆ. ನಮ್ಮ ಮನೆಯಲ್ಲಿ




ಯಾರೂ ಕಥೆಗಳನ್ನು ಹೇಳುವುದಿಲ್ಲ. ಒಳ್ಳೇ ಗಮ್ಮತ್ತಿನ ತಾತ ನಿನ್ನ ತಾತ" ಎಂದನು ಹೊಸ ಹುಡುಗ.

ಮರುದಿನ ರಾಜು ಹೊಸ ಹುಡುಗನನ್ನು ಸಾಂಬಯ್ಯನಿಗೆ ಪರಿಚಯ ಮಾಡಿಸಿ, "ತಾತಯ್ಯಾ, ಇವನಿಗೆ ಕಥೆಗಳೆಂದರೆ ಬಹಳ ಇಷ್ಟವಂತೆ. ಇವತ್ತಿನಿಂದ ದಿನಾ ಇವನು ನಿಮ್ಮ ಕಥೆಗಳನ್ನು ಕೇಳುತ್ತಾನೆ" ಎಂದನು.

ಸಾಂಬಯ್ಯನು ಬಹಳ ಸಂತೋಷಪಟ್ಟು, ರಾಜುನ ಪಟ್ಟುಬಿಟ್ಟು, ಹೊಸ ಹುಡುಗನಿಗೆ ಒಂದು ಕಥೆಯನ್ನು ಹೇಳಿದನು. ಆ ಕಥೆಯಲ್ಲಿ ಒಬ್ಬ ರಾಜಕುಮಾರನೂ ಮತ್ತೊಂದು ದೇಶದ ರಾಜಕುಮಾರಿಯೂ ಇರುತ್ತಾರೆ, ರಾಜಕುಮಾರಿಯನ್ನು ಒಬ್ಬ ಭಯಂಕರನಾದ ಮಂತ್ರವಾದಿ ಎತ್ತಿಕೊಂಡು ಹೋಗುತ್ತಾನೆ. ರಾಜಕುಮಾರನು ಅನೇಕ ವರ್ಷ ಕಷ್ಟಪಟ್ಟು, ಅದ್ಭುತವಾದ ವಿದ್ಯೆಗಳನ್ನು ಕಲಿತು ಮಾಂತ್ರಿಕನನ್ನು ಕೊಂದು ರಾಜಕುಮಾರಿಯನ್ನು ಬಿಡುಗಡೆ ಮಾಡಿ, ತಾನೆ ಮದುವೆಯಾಗುತ್ತಾನೆ.

ಈ ಕಥೆಯನ್ನು ಕೇಳಿ ಹೊಸ ಹುಡುಗ ಸಾಂಬಯ್ಯನನ್ನು ನೋಡಿ, "ಆಮೇಲೆ ಮತ್ತೆ ಯಾವ ದೇಶದಲ್ಲಿಯೂ ಮಾಂತ್ರಿಕರು ರಾಜಕುಮಾರಿಯರನ್ನು ಎತ್ತಿಕೊಂಡು ಹೋಗುವುದಿಲ್ಲವೇನು?" ಎಂದು ಕೇಳಿದನು.

"ಎತ್ತಿಕೊಂಡು ಹೋದರೆ ನಮಗೇನು?" ಎಂದನು ಸಾಂಬಯ್ಯ ನಗುತ್ತ.

"ನಮಗೆ ಏಕೇ ಅಂದರೆ, ನಮ್ಮ ದೇಶದ ರಾಜಕುಮಾರ ಇದ್ದಾನಷ್ಟೇ? ತುಂಬಾ ಒಳ್ಳೆಯವನಂತೆ ತಾತಾ. ತುಂಬಾ ಉಪಕಾರ ಮಾಡುತ್ತಾನಂತೆ. ಏನೇನೋ ವಿದ್ಯೆ ಕಲಿತಿದ್ದಾನಂತೆ. ಅಂಥವನು ರಾಜಕುಮಾರಿಯನ್ನೇ ಮದುವೆಯಾಗದೆ ಸುಮ್ಮನಿರಲಾರನಷ್ಟೆ? ಮದುವೆಯಾದ ಮೇಲೆ ನಮ್ಮ ರಾಜಕುಮಾರನು ಕೂಡಾ ಯಾರಾದರೂ ಕಷ್ಟದಲ್ಲಿ ಬಿದ್ದರೆ ಉಪಕಾರ ಮಾಡಲಿಕ್ಕೂ ಹೋದಾನು, ಅಲ್ಲವೇ ತಾತಾ?" ಎಂದನು ಹೊಸ ಹುಡುಗ.

ಅವನ ಮಾತು ಕೇಳಿ ಸಾಂಬಯ್ಯನಿಗೆ ಬಹಳ ಉತ್ಸಾಹ ಬಂತು. "ಹೌದೌದು, ಒಳ್ಳೇ ಮಾತು ಹೇಳಿದಿ" ಎಂದು ಸ್ವಲ್ಪ ತಡೆದು, "ಅಂದ ಹಾಗೆ ಪ್ಲವಂಗ ದೇಶದಲ್ಲಿ ಮಾಂತ್ರಿಕನೊಬ್ಬನು, ತನಗೆ ಯಾರೂ ಇದಿರಿಲ್ಲದ ಹಾಗೆ ವಿಜೃಂಭಿಸಿದನು. ನೂರು ಮಂದಿ ರಾಜಕುಮಾರರನ್ನೂ, ನೂರ ಒಂದು ರಾಜಕುಮಾರಿಯರನ್ನೂ ದೇವಿಗೆ ಬಲಿ ಕೊಡಬೇಕೆಂದು ಆಲೋಚನೆ ಮಾಡಿದನು..." ಎಂದು ಕಥೆಯನ್ನು ಪ್ರಾರಂಭಿಸಿ, ಆ ಮಾಂತ್ರಿಕನನ್ನು ಮೊದಲನೇ ರಾಜಕುಮಾರನೇ ಕೊಂದು ತನ್ನ ದೇಶಕ್ಕೆ ಹಿಂದಿರುಗಿ ಬರುವಾಗ, ಅವನು ಮನೆಯಿಂದ ಹೊರಟುಹೋಗಿ ಬಹಳಕಾಲವಾಗಿತ್ತಷ್ಟೆ? ಅವನನ್ನು ನೋಡಿ ಜನರಿಗೆಲ್ಲ ಸಂತೋಷವಾಯಿತು" ಎಂದು ಕಥೆಯನ್ನು ಮುಗಿಸಿದನು. ಹೊಸ ಹುಡುಗನು ಏನೋ ಅತೃಪ್ತಿಯಿಂದ,

"ಹೌದು ತಾತಾ. ಆ ರಾಜಕುಮಾರ ಅಷ್ಟು ವರ್ಷ ಹಿಂದಿರುಗಿ ಬಾರದಿದ್ದಾಗ ಅವನ ಹೆಂಡತಿ ರಾಜಕುಮಾರಿ ಒಬ್ಬಳೇ ಇರುತ್ತಾಳೆಯೇ? ರಾಜ್ಯವನ್ನು ಮಂತ್ರಿಗಳ ವಶಕ್ಕೆ ಒಪ್ಪಿಸಿ ತನ್ನ ಗಂಡನನ್ನು ಹುಡುಕುತ್ತಾ ಹೋಗದಿರುವಳೇ? ರಾಜಕುಮಾರಿ ಹಾಗೆ ಹೊರಟುಬಿಟ್ಟರೆ ಎಷ್ಟೆಲ್ಲಾ ಕಷ್ಟಗಳು ಬಂದಾವು? ಹಾಗೆಲ್ಲಾ ಆಗದೆ ಹೋಗುತ್ತೆಯೇ ತಾತಾ?" ಎಂದು ಕೇಳಿದನು.

"ಆಗುತ್ತೆ ಆಗುತ್ತೆ" ಎಂದು ಸಾಂಬಯ್ಯ ಮತ್ತೆ ಕಥೆಯನ್ನು ಪ್ರಾರಂಭ ಮಾಡಿದನು. ಅವನು ಎಷ್ಟು ಹೇಳಿದರೂ ಹೊಸ ಹುಡುಗನಿಗೆ ಅನುಮಾನ ಬರುತ್ತಲೇ ಇತ್ತು. ಆದುದರಿಂದ ಸಾಂಬಯ್ಯ ಕಥೆಯನ್ನು ಮುಂದುವರಿಸಿಕೊಂಡು ಹೋಗಲೇ ಬೇಕಾಯಿತು.

ಹಾಗೆ ಹೇಳುತ್ತಾ ಹೋಗುವಾಗ ಸಾಂಬಯ್ಯ ದಣಿದು ಗಂಟಲ ಪಸೆ ಆರಿ "ಇನ್ನುಳಿದ ಕಥೆ ನಾಳೆ ಹೇಳುತ್ತೇನೆ" ಎಂದನು.

"ಅಯ್ಯೋ! ನಾಳಿನವರೆಗೆ ತಾಳೋದೆ! ಮರೆತು ಹೋದಿತು. ಈಗಲೇ ಹೇಳಿ ತಾತಾ!" ಎಂದನು ಹೊಸ ಹುಡುಗ.

ಸಾಂಬಯ್ಯ ಒಮ್ಮೆ ದೊಡ್ಡದಾಗಿ ಶ್ವಾಸಹೀರಿ, "ಹೋಗಿ ಸ್ವಲ್ಪ ನೀರು ತಾರಪ್ಪ. ನೀರು ಕುಡಿದು ಕಥೆ ಪೂರಾ ಹೇಳಿ ಮುಗಿಸುತ್ತೇನೆ" ಎಂದನು. ಹೊಸ ಹುಡುಗನು ನೀರು ತರಲು ಒಳಗೆ ಹೋದನು, ಕೂಡಲೇ ಸಾಂಬಯ್ಯ ಬೀದಿಗಿಳಿದು ಬೇಗಬೇಗನೆ ಓಡಿದನು. ದಾರಿಯಲ್ಲಿ ಕೇಳಿದವರಿಗೆ ತನ್ನ ಮೊಮ್ಮಗ ರಾಜುವನ್ನು ಕರೆಯಲು ಹೋಗುವುದಾಗಿ ಹೇಳಿದನು. ತನ್ನನ್ನು ಹಿಡಿಯಲು ತಾತಯ್ಯ ಬರುತ್ತಿದ್ದಾರೆಂದು ತಿಳಿದು ರಾಜು ಅವನಿಗೆ ಸಿಕ್ಕದಂತೆ ಓಡಿದನು. ಆಗ ಯಾರೋ ರಾಜುವನ್ನು ಹಿಡಿದು ಸಾಂಬಯ್ಯನಿಗೆ ಒಪ್ಪಿಸಿದರು.

ಸಾಂಬಯ್ಯ ತೇಕುತ್ತಾ "ಕಂದಾ ರಾಜೂ! ಹೆದರಬೇಡ. ನಾನು ನಿನಗೆ ಕಥೆ ಹೇಳಲು ಬರಲಿಲ್ಲ. ನೀನು ಕರಕೊಂಡು ಬಂದ ಆ ಹೊಸ ಹುಡುಗ ಇನ್ನು ನಮ್ಮ ಮನೆಗೆ ಬಾರದಹಾಗೆ ಮಾಡಿಬಿಡು. ನಿನ್ನನ್ನು ಎಂದಿಗೂ ಕಥೆ ಕೇಳಲು ಕರೆಯುವುದಿಲ್ಲ" ಎಂದನು.

ಏಕೆ ತಾತನಲ್ಲಿ ಇಂತಹ ಬದಲಾವಣೆ ಬಂತೆಂದು ತಿಳಿಯದಿದ್ದರೂ, ಸಾಂಬಯ್ಯ ಹೇಳಿದಂತೆ ಮಾಡಲು ಒಪ್ಪಿದನು ರಾಜು.

ಆಮೇಲೆ ಸಾಂಬಯ್ಯ ಯಾರಿಗೂ ಕಥೆ ಹೇಳಲು ಹೋಗಲಿಲ್ಲ. ಯಾರಿಂದಲೇ ಆಗಲಿ ಅವರಿಗೆ ಇಷ್ಟವಿಲ್ಲದ ಕೆಲಸವನ್ನು ಬಲವಂತದಿಂದ ಮಾಡಿಸುವುದರಿಂದಾಗುವ ಕಷ್ಟವು ಈಗ ಸಾಂಬಯ್ಯನಿಗೆ ತಿಳಿದು ಬಂದಿತು.






# ರಾಜನ ಸಹಾಯ

“ಶಠಂ ಪ್ರತಿ ಶಾಠ್ಯಂ” ಎಂಬಂತೆ ಪಟ್ಟು ಹಿಡಿದ ಬೇತಾಳಕ್ಕೆ ತಕ್ಕಷ್ಟೇ ಪಟ್ಟಿನಿಂದ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಹೆಗಲ ಮೇಲೆ ಹಾಕಿಕೊಂಡು, ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿದ್ದ ಬೇತಾಳವು ಮಾತಾಡಲು ತೊಡಗಿ, “ಎಲೈ ಮಹಾರಾಜನೇ, ನೀನು ಪಟ್ಟುಬಿಡದೆ ಇಷ್ಟೊಂದು ಶ್ರಮ ಸಾಧನೆ ಮಾಡುವುದನ್ನು ನೋಡುವಾಗ ನೀನು ಕೇವಲ ಸರಳ ಮುಗ್ಧನೋ, ಅಥವಾ ನಿನ್ನ ಮೇಲೆ ವಿಧಿಯೇ ವಕ್ರಿಸಿದೆಯೋ ಎಂಬ ಅನುಮಾನ ನನಗಾಗುತ್ತದೆ. ಒಂದೊಂದು ಸಾರಿ ಎಷ್ಟೋ ದಯಾ ಧರ್ಮ ಗುಣವುಳ್ಳವರೇ ಪರಮ ಸ್ವಾರ್ಥಿಗಳಾಗುತ್ತಾರೆ. ಕಠಿಣಾತ್ಮರ ಹಾಗೆ ಪ್ರವರ್ತಿಸುತ್ತಾರೆ. ನಿನ್ನನ್ನು ಈ ಕಾರ್ಯಕ್ಕೆ ನಿಯೋಜಿಸಿದವರು ಕಾರ್ಯವು ಅವರಿಗೆ ಅನುಕೂಲವಾದ ಮೇಲೆ, ನಿನ್ನ ಮೇಲೆ ಕಠಿಣವಾಗಿ ಪ್ರವರ್ತಿಸಲಾರರೆಂಬ ನಂಬುಗೆ ಏನು ? ನಂಬುಗೆಯನ್ನು ಭಂಗಿಸಿದ ಭೀಮೇಶ್ವರನೆಂಬ ರಾಜನ ಕಥೆಯನ್ನು ಅದಕ್ಕೆ ಉದಾಹರಣೆ

## ಬೇತಾಳ ಕಥೆಗಳು



ಯಾಗಿ ಹೇಳುತ್ತೇನೆ. ಕೇಳುತ್ತಾ ನಡೆಯುವ ಕಷ್ಟವನ್ನಾದರೂ ಮರೆಯುವಿಯಂತೆ" ಎಂದು ಕಥೆಯನ್ನು ಹೇಳತೊಡಗಿತು.

ಒಂದು ಕಾಲದಲ್ಲಿ ಭೀಮೇಶ್ವರನೆಂಬ ರಾಜನು ಪಾಲಿಸುವ ಗಿರಿದುರ್ಗವೆಂಬ ರಾಜ್ಯದಲ್ಲಿ ರಂಗಪುರ, ರಾಮಪುರವೆಂಬ ಎರಡು ಗ್ರಾಮಗಳು ಅಕ್ಕಪಕ್ಕಗಳಲ್ಲಿದ್ದುವು. ರಂಗಪುರದ ಅಧಿಕಾರಿ ಸೀನಯ್ಯನು ಗ್ರಾಮ ಜನರ ಹಿತವನ್ನೇ ಮುಖ್ಯವಾಗಿ ನೋಡುವವನು. ಆದರೆ ರಾಮಪುರದ ಅಧಿಕಾರಿಯಾದ ಗೋಪಯ್ಯ ಸ್ವಾರ್ಥ ದೃಷ್ಟಿಯುಳ್ಳವನಾಗಿ ಎಲ್ಲ ವಿಧದಲ್ಲಿಯೂ ಸೀನಯ್ಯನಿಗೆ ವಿರುದ್ಧನಾಗಿದ್ದನು.

ಅಲ್ಲದೆ ರಂಗಪುರವು ತಗ್ಗು ಪ್ರದೇಶದಲ್ಲಿರುವ ಗ್ರಾಮ. ಪ್ರತಿ ವರ್ಷವೂ ಮಳೆಗಾಲವೆಂಬುದು ಆ ಊರಿಗೆ ದೊಡ್ಡ ಗಂಡಾಂತರವೇ. ಸುತ್ತುಮುತ್ತು ಜಿರಿಗಟ್ಟಿ ಮಳೆ ಸುರಿದಾಗಲೆಲ್ಲ, ಎಲ್ಲೆಲ್ಲಿಯ ನೀರೆಲ್ಲ ಬಂದು ರಂಗಪುರವನ್ನು ಜಲಮಯ ಮಾಡುತ್ತಿದ್ದಿತು. ಇದನ್ನು ಹೇಗೆ ತಡೆಯುವುದೆಂದು ಸೀನಯ್ಯನು ಅನೇಕ ವರ್ಷಗಳಿಂದ ಆಲೋಚಿಸಿಕೊಂಡಿದ್ದನು. ಏನೂ ಬಗೆಹರಿದಿದ್ದಿಲ್ಲ.

ಒಮ್ಮೆ ವಸಂತ ಋತುವಿನ ಕಾಲದಲ್ಲಿ ಒಬ್ಬ ಜ್ಞಾನಿ ರಂಗಪುರಕ್ಕೆ ಬಂದನು. ಆಗ ರಂಗಪುರವು ಬಹಳ ಚೆಂದಾಗಿದ್ದಿತು. ಜನರ ಗುಣಗಳೂ ಅದಕ್ಕೆ ಮೆರಗು ಕೊಡುವಂತಿರುವುದನ್ನು ನೋಡಿ ಆ ಜ್ಞಾನಿ, "ಈ ಗ್ರಾಮಕ್ಕೆ ಒಳ್ಳೆಯದಾಗಲಿ. ಎಲ್ಲಾ ಋತುಗಳೂ ಸರಿಯಾದ ಗುಣ ತೋರಿಸುತ್ತಿರಲಿ. ಕಾಲಕಾಲಕ್ಕೆ ಒಳ್ಳೆಯ ಮಳೆ ಸುರಿದು ಗ್ರಾಮದವರೆಲ್ಲಾ ವೈಭವದಿಂದ ನೆಮ್ಮದಿಯಾಗಿ ಜೀವಿಸಲಿ" ಎಂದು ಹರಸು ನುಡಿಗಳನ್ನು ಹೇಳಿದನು.

ಅದನ್ನು ಕೇಳಿ ಸೀನಯ್ಯನು ಗಾಬರಿಬಿದ್ದು, "ಒಳ್ಳೆಯ ಮಳೆಗಿಳೆ ಎಂದು ಹೇಳಬೇಡಿರಿ ಸ್ವಾಮಿ. ಮಳೆಯ ಹೆಸರು ಕೇಳಿದರೇನೇ ನಮಗೆಲ್ಲಾ ಭಯ" ಎಂದು ಗ್ರಾಮಸ್ಥರು ಇದಿರಿಸುವ ಮಳೆಗಾಲದ ಮುಳುಗಾಟದ ಕಷ್ಟವನ್ನು ಜ್ಞಾನಿಗೆ ಮನಗರಗುವಂತೆ ವಿವರಿಸಿದನು.

ಅದನ್ನು ಕೇಳಿ ಜ್ಞಾನಿ, "ಹಾಗೇನು? ನನ್ನೊಂದಿಗೆ ಬಂದು ನನಗೆ ಎಲ್ಲವನ್ನೂ ತೋರಿಸಿರಿ. ಒಂದು ಸಾರಿ ನಾನು ಗ್ರಾಮವನ್ನೆಲ್ಲಾ ತಿರುಗಾಡಿ ನೋಡುತ್ತೇನೆ" ಎಂದನು.

ಸೀನಯ್ಯನು ಆತನೊಂದಿಗೆ ಇಡೀ ಗ್ರಾಮದಲ್ಲಿ ತಿರುಗಾಡಿ, ಮಳೆಯ ನೀರು ಯಾವ ಯಾವ ಕಡೆಯಿಂದ ಹೇಗೆ ಬಂದು ಮುಳುಗಿಸುವುದೆಂಬುದನ್ನು ತೋರಿಸಿದನು.

ಜ್ಞಾನಿ ಸ್ವಲ್ಪಹೊತ್ತು ಆಲೋಚನೆ ಮಾಡಿ, "ನಿಮ್ಮ ಸಮಸ್ಯೆಯನ್ನು ಪರಿಷ್ಕರಿಸಲು ಅಷ್ಟೇನೂ ಕಷ್ಟಪಡಬೇಕಾಗಿಲ್ಲ. ಗ್ರಾಮದ ಸುತ್ತಲೂ ಆಳವೂ ಅಗಲವೂ ಆದ ಕಂದಕವನ್ನು ಅಗೆಯಿಸಿರಿ. ಊರಿನ ಬದಿಯಲ್ಲಿ ಒಂದು ಕೆರೆಯನ್ನೂ ತೋಡಿಸಬೇಕು.



ಕೆರೆಯ ನೀರು ಕಂದಕದೊಳಗೂ, ಕಂದಕದ ನೀರು ಗುಡ್ಡಗಳ ಕಡೆಗೂ ಹೋಗಿ ಕಣಿವೆಗಳಿಗೆ ಬೀಳುವ ಹಾಗೆ ಅಲ್ಲಲ್ಲಿ ತೂಬುಗಳನ್ನೂ ಇಡಿಸಿರಿ. ಈ ಕೆಲಸ ಪೂರೈಸಲು ಒಂದೂವರೆ ಲಕ್ಷ ವರಹಗಳು ಬೇಕಾಗುತ್ತವೆ. ಅದನ್ನು ಈ ದೇಶವನ್ನಾಳುವ ರಾಜ ಭೀಮೇಶ್ವರನನ್ನು ಕೇಳಿದರೆ ಪ್ರಜೆಗಳ ಹಿತಕ್ಕಾಗಿ ಬೇಕಾದಷ್ಟು ಧನವು ಸಿಗುತ್ತದೆ. ರಾಜನು ಬಹಳ ಧರ್ಮಗುಣ ಉಳ್ಳವನು." ಎಂದು ಸಲಹೆ ಹೇಳಿದನು.

ಜ್ಞಾನಿ ಹೇಳಿದ ಸಲಹೆ ಸೀನಯ್ಯನಿಗೆ ಹಿಡಿಸಿತು. ಹಾಗೆಯೇ ಮಾಡಬೇಕೆಂಬ ನಿಶ್ಚಯಕ್ಕೂ ಬಂದನು. ಇಷ್ಟರಲ್ಲಿ ರಂಗಪುರಕ್ಕೆ ಬಂದ ಜ್ಞಾನಿಯ ಸಮಾಚಾರವು ರಾಮಪುರದ ಅಧಿಕಾರಿ ಗೋಪಯ್ಯನಿಗೆ ತಿಳಿಯಿತು.

ಕೂಡಲೇ ಅವನು ಜ್ಞಾನಿಯನ್ನು ತನ್ನ ಗ್ರಾಮಕ್ಕೂ ಬರಬೇಕೆಂದು ಆಹ್ವಾನ ಕಳುಹಿಸಿದನು. ಹಾಗೆ ಬಂದ ಜ್ಞಾನಿಗೆ ಉಪಚಾರಗಳನ್ನು ಮಾಡಿ "ನಮ್ಮ ಗ್ರಾಮವು ಬಹುಕಾಲ ಒಳ್ಳೆಯದಾಗಿರುವಂತೆ ನೀವು ಏನಾದರೂ ಒಳ್ಳೆಯ ಸಲಹೆ ಮಾಡಬೇಕು" ಎಂದು ಕೇಳಿಕೊಂಡನು ಗೋಪಯ್ಯ.

ಜ್ಞಾನಿ ಗೋಪಯ್ಯನೊಂದಿಗೆ ರಾಮಪುರವನ್ನೆಲ್ಲಾ ತಿರುಗಾಡಿ ನೋಡಿದನು. ರಾಮಪುರವು ಸ್ವಲ್ಪ ಎತ್ತರ ಪ್ರದೇಶದಲ್ಲಿದ್ದಿತು. ಆ ಗ್ರಾಮಕ್ಕೆ ನೀರಿನಿಂದ ಮುಳುಗುವ ಭಯವೇನೂ ಇರಲಿಲ್ಲ. ಎಲ್ಲರೂ ಸುಖಶಾಂತಿಯಿಂದಿರುವಂತೆ ಕಾಣುತ್ತಿತ್ತು.

ಜ್ಞಾನಿ ಗ್ರಾಮದೊಳಗೆಲ್ಲಾ ತಿರುಗಾಡಿ ಬಂದು, "ಇಂತಹ ಗ್ರಾಮದಲ್ಲಿರುವವರೆಲ್ಲರೂ ಅದೃಷ್ಟವಂತರು. ಗ್ರಾಮದೊಳಗೂ, ಸುತ್ತುಮುತ್ತಲೂ ತೆಂಗಿನ ತೋಟ ಹೇರಳವಾಗಿವೆ. ತೆಂಗಿನ ಸಿಪ್ಪೆಗಳಿಂದ ನಾರುಗಳಿಂದ, ಕರಟಗಳಿಂದ ಜನರಿಗೆ ಉಪಯೋಗವಾಗುವಂತೆ ದೊಡ್ಡದೊಂದು ಕೈಗಾರಿಕೆಯ ಪರಿಶ್ರಮವನ್ನು ಇಲ್ಲಿ ಪ್ರಾರಂಭಿಸಬಹುದು. ತಯಾರಾಗುವ ವಸ್ತುಗಳನ್ನು ದೇಶ ವಿದೇಶಗಳಿಗೂ ಕಳುಹಿಸಬಹುದು. ಅದಕ್ಕೆ ಐದು ಲಕ್ಷ ಮೂಲಧನ ಬೇಕಾಗುತ್ತದೆ. ಈ ದೇಶದ ರಾಜನನ್ನು ಕೇಳಿ ಆ ಧನವನ್ನು ಪಡೆಯಿರಿ. ಈ ಕೈಗಾರಿಕಾ ಪರಿಶ್ರಮದಿಂದ ಎಷ್ಟೋ ಜನರಿಗೆ ಜೀವನೋಪಾಧಿ ಕೂಡಾ ಸಿಗುತ್ತದೆ. ಇದು ದೇಶಕ್ಕೆ ಒಳ್ಳೆಯದಾಗುವ ಪರಿಶ್ರಮವಾದ್ದರಿಂದ ರಾಜನು ತಪ್ಪದೆ ಸಹಾಯ ಮಾಡುತ್ತಾನೆ" ಎಂದನು.

ಈ ಸಲಹೆಯನ್ನು ಕೇಳಿ ಗೋಪಯ್ಯನಿಗೆ ಬಹಳ ಸಂತೋಷವಾಯಿತು.

ತನ್ನ ಗ್ರಾಮವನ್ನು ಮಳೆಯ ಹಾವಳಿಯಿಂದ ಕಾಪಾಡುವ ಉದ್ದೇಶದಿಂದ ಸೀನಯ್ಯ ರಾಜನ ಬಳಿಗೆ ಹೋಗಲು ಹೊರಟನು. ತನ್ನ ವಾಕ್ಚಾತುರ್ಯದಿಂದ ರಾಜನನ್ನು ಮೆಚ್ಚಿಸಿ ತೆಂಗಿನ ಪರಿಶ್ರಮವನ್ನು ಪ್ರಾರಂಭಿಸುವ ಉದ್ದೇಶದಿಂದ ಸೀನಯ್ಯನಿಗಿಂತ



ಮೊದಲೇ ಗೋಪಯ್ಯನೂ ರಾಜಧಾನಿಗೆ ಹೋದನು. ಅಲ್ಲಿಯ ಕೋಶಾಧಿಕಾರಿ ಅವನ ಪರಿಚಿತನಾದುದರಿಂದ, ಮೊದಲು ಅವನ ಬಳಿಗೇ ಹೋದನು ಗೋಪಯ್ಯ. ತಾನು ಬಂದ ಕಾರ್ಯವನ್ನು ಕುರಿತು ಕೋಶಾಧಿಕಾರಿಯೊಡನೆ ವಿವರವಾಗಿ ತಿಳಿಸಿದನು.

ಕೋಶಾಧಿಕಾರಿ ಗೋಪಯ್ಯ ಹೇಳಿದುದನ್ನೆಲ್ಲಾ ಕೇಳಿ, " ಸತ್ಯ ಹೇಳಿರಿ, ಈ ತೆಂಗಿನ ಪರಿಶ್ರಮ ಪ್ರಾರಂಭಿಸುವ ಆಲೋಚನೆ ಇಷ್ಟು ಕಾಲ ನಿಮಗೆ ಬರಲಿಲ್ಲ. ಥಕ್ಕನೆ ಈಗ ಬಂದಿದೆ. ಏಕೆ ಬಂತು ? ತೆಂಗಿನ ತೋಟವು ಬಹಳ ಕಾಲದಿಂದ ಇದ್ದೇ ಇದ್ದಿತಷ್ಟೆ ? ನಿಜ ಹೇಳಿರಿ " ಎಂದನು ಕೋಶಾಧಿಕಾರಿ.

" ಇತ್ತೀಚೆಗೆ ನಮ್ಮ ತೆಂಗಿನ ತೋಟ ಬಹಳ ದೊಡ್ಡದಾಯಿತು. ನಾರು ಗೆರಟೆಗಳು ವ್ಯರ್ಥವಾಗಿ ಹೋಗುತ್ತವೆ. ಸುಮ್ಮನೆ ಉರುವಲಿಗಾಗಿ ಸುಟ್ಟು ಬೂದಿ ಮಾಡುವ ಬದಲಿಗೆ ಪರಿಶ್ರಮ ಪ್ರಾರಂಭಿಸೋಣವೆಂಬ ಯೋಚನೆ ಬಂತು. ಗ್ರಾಮದಲ್ಲೊಂದು ಪರಿಶ್ರಮ ಶಾಲೆ ಇದ್ದರೆ ಅಲ್ಲಿ ತಯಾರಾಗುವ ವಸ್ತುಗಳಿಗೆ ಒಳ್ಳೆಯ ಗಿರಾಕಿ ಬಾರದೆ ಹೋಗದು " ಎಂದನು ಗೋಪಯ್ಯ.

" ಅಂದರೆ ಆ ಪರಿಶ್ರಮವನ್ನು ನೀವೇ ಪ್ರಾರಂಭಿಸಿ ಒಳ್ಳೆಯ ಲಾಭ ಗಳಿಸಬೇಕೆಂದಿದ್ದೀರಿ. ಇದು ನಿಜ ತಾನೇ ? " ಎಂದು ಕೇಳಿದನು ಕೋಶಾಧಿಕಾರಿ.

" ಅದು ನಿಜವೇ ಅನ್ನಿ, ವ್ಯಾಪಾರ ಅಂದಮೇಲೆ ಲಾಭ ಬರುವುದು ಸ್ವಾಭಾವಿಕ ತಾನೇ ? ತಪ್ಪೇನಿಲ್ಲವಷ್ಟೆ ? " ಎಂದನು ಗೋಪಯ್ಯ.

" ಸರಿ, ನೀವು ನಿಜವನ್ನು ಒಪ್ಪಿಕೊಂಡುದರಿಂದ ನಾನು ಒಳ್ಳೆಯ ಸಲಹೆಯನ್ನೇ ಹೇಳುತ್ತೇನೆ. ನಮ್ಮ ಮಹಾರಾಜರ ಧರ್ಮಗುಣವು ಎಲ್ಲರೂ ತಿಳಿದದ್ದೇ. ಆದರೆ ಅವರದೊಂದು ವಿಚಿತ್ರ ಪದ್ಧತಿ. ಕೇಳಿದಷ್ಟು ಹಣ ಯಾರಿಗೂ ಕೊಡರೆಂಬುದು ಅವರ ಸಿದ್ಧಾಂತ. ನಿಮಗೆ ಐದು ಲಕ್ಷ ವರಹ ಬೇಕಾಗಿದ್ದರೆ ಹನ್ನೆರಡು ಲಕ್ಷ ಬೇಕಾಗುತ್ತದೆಂದು ಕೇಳಿರಿ. ಅವರು ಆರು ಲಕ್ಷ ಕೊಡುತ್ತಾರೆ. ಗೊತ್ತಾಯಿತೆ ? " ಎಂದನು ಕೋಶಾಧಿಕಾರಿ.

" ಗೊತ್ತಾಯಿತು. ಆದರೆ ನನಗೆ ಬೇಕಾದುದು ಆರು ಲಕ್ಷವಲ್ಲ, ಐದು ಲಕ್ಷವೇ. ಆದುದರಿಂದ ಅವರ ಹತ್ತಿರ ಹತ್ತು ಲಕ್ಷ ವರಹಾ ಕೇಳುತ್ತೇನೆ " ಎಂದನು ಗೋಪಯ್ಯ.

" ನಿಮಗೆ ಅರ್ಥವಾಗಿಲ್ಲಾ ಅನ್ನಿ. ಆರು ಲಕ್ಷ ಸಿಗುವ ಉಪಾಯವನ್ನೇ ಮಾಡಿರಿ ಅಂದೆನಲ್ಲ ? ಉಳಿಯುವ ಆ ಒಂದು ಲಕ್ಷವನ್ನು ನಾವಿಬ್ಬರೂ ಅರ್ಧಾರ್ಧ ಮಾಡಿಕೊಳ್ಳೋಣ " ಎಂದನು ಕೋಶಾಧಿಕಾರಿ ಮುಗುಳುನಗುತ್ತ ಕಣ್ಣು ಚಿಟುಕಿಸಿಕೊಂಡು.

" ಓ ! ಸರಿಸರಿ ! " ಎಂದು ಗೋಪಯ್ಯ ಸಂತೋಷದಿಂದ ಒಪ್ಪಿಕೊಂಡನು. ಕೋಶಾಧಿಕಾರಿ ಅವನನ್ನು ಒಂದು ವಾರದವರೆಗೆ ರಾಜಧಾನಿಯಲ್ಲೇ ಇರಬೇಕೆಂದೂ ಹೇಳಿದನು.

ಇಷ್ಟರಲ್ಲಿ ಸೀನಯ್ಯ ಕೂಡಾ ರಾಜಧಾನಿಯನ್ನು ಸೇರಿಕೊಂಡನು. ಈ ಸಂಗತಿಯನ್ನು ತಿಳಿದು ಗೋಪಯ್ಯನು ತನಗೂ ಅವನಿಗೂ ಇರುವ ತಾರತಮ್ಯವನ್ನು ಆಲೋಚಿಸತೊಡಗಿದನು. ತಾನೇನೋ ತನ್ನ ಗ್ರಾಮದಲ್ಲಿ ಕೈಗಾರಿಕಾ ಪರಿಶ್ರಮವನ್ನು ಸ್ಥಾಪಿಸಲು ಬಂದವನು. ಆದರಿಂದ ಹೆಚ್ಚಿನ ಲಾಭವು ತನಗೇ. ಸೀನಯ್ಯನು ಮಾಡುವ ಕೆಲಸ ಗ್ರಾಮಸ್ಥರಿಗೆ ಲಾಭವಾಗುವಂತಹುದು. ಆದರಿಂದ ಅವನಿಗೆ ತನಗಿಂತಲೂ ದೊಡ್ಡ ಹೆಸರು ಬರಬಹುದು. ಹಾಗಾಗದಂತೆ ಸೀನಯ್ಯನನ್ನು ತಪ್ಪು ದಾರಿ ಹಿಡಿಸಬೇಕು.

ಹೀಗೆ ಆಲೋಚಿಸಿ ಗೋಪಯ್ಯನು ಸೀನಯ್ಯನನ್ನು ನೋಡಲು ಬಂದು, "ರಾಜರನ್ನು ನೋಡಲು ಬಂದಿದ್ದೀರಾ ? ನಾನೂ ಅಂತಹುದೊಂದು ಸಹಾಯಕ್ಕಾಗಿಯೇ ಬಂದೆನು. ಎರಡು ದಿನ ಮೊದಲೇ ಬಂದುದರಿಂದ ಕೆಲವು ರಹಸ್ಯಗಳು ತಿಳಿಯಿತು. ಪಕ್ಕದ ಗ್ರಾಮದವರಾದುದರಿಂದ ನಿಮಗೂ ಹೇಳುತ್ತೇನೆ. ರಾಜನಿಗೆ ದೊಡ್ಡ ದೊಡ್ಡ ಮೊತ್ತ ಕೇಳುವವರೆಂದರೆ ಕೋಪವೂ ಅನುಮಾನವೂ ಬರುತ್ತದಂತೆ. ಕಡಿಮೆ ಯಾರು ಕೇಳುವರೋ ಅವರಿಗೆ ಇಮ್ಮಡಿಯಾಗಿ ಹಣ ಕೊಡುವರಂತೆ. ನೀವು ಲಕ್ಷ ವರಹ ಬೇಕೆಂದು ಕೇಳಿದರೆ ರಾಜರು ಎರಡು ಲಕ್ಷ ಕೊಡುತ್ತಾರೆ. ಗ್ರಾಮದಲ್ಲಿ ಕಂದಕವನ್ನೂ ಕೆರೆಯನ್ನೂ ತೋಡಿಸಿದ ಮೇಲೆ ನಿಮಗೆ ಅರ್ಧ ಲಕ್ಷ ಉಳಿಯುತ್ತದೆ. ಇದು ಅಸಲು ರಹಸ್ಯ !" ಎಂದನು.

ಸೀನಯ್ಯನು "ಓಹೋ !" ಎಂದು ತಲೆಯಾಡಿಸಿ ಸುಮ್ಮನಾಗಿಬಿಟ್ಟನು. ಗೋಪಯ್ಯನ ಸಲಹೆ ಅವನಿಗೆ ಹಿಡಿಸಲಿಲ್ಲ. ರಾಜನ ಹತ್ತಿರ ಹಣ ಕೇಳುವಾಗ ಅವನು ಹೇಳಿದ ಹಾಗೆ ಕಡಿಮೆ ಕೇಳುವುದೇ ಒಳ್ಳೆಯದೆಂದುಕೊಂಡನು.

ನಾಲ್ಕು ದಿನಗಳ ಮೇಲೆ ರಾಜನು ಎಲ್ಲೆಲ್ಲಿಂದ ಬಂದ ಗ್ರಾಮಾಧಿಕಾರಿಗಳನ್ನೆಲ್ಲಾ ಸಭೆಗೆ ಕರೆಯಿಸಿ ಅವರವರ ಅಹವಾಲುಗಳನ್ನು ಕೇಳಿದನು. ಗ್ರಾಮಾಧಿ





ಕಾರಿಗಳು ಒಬ್ಬೊಬ್ಬರೇ ಅವರವರ ಕುಂದುಕೊರತೆಗಳನ್ನು ಹೇಳಿಕೊಂಡರು, ರಾಜನು ಅವರು ಕೇಳಿದುದರಲ್ಲಿ ಅರ್ಧಭಾಗದಷ್ಟೇ ಧನ ನೀಡುತ್ತಿದ್ದನು. ಇದನ್ನೆಲ್ಲ ಸೀನಯ್ಯ ಗಮನಿಸಿಕೊಂಡೇ ಇದ್ದನು.

ಒಬ್ಬ ಗ್ರಾಮಾಧಿಕಾರಿ ಸೀನಯ್ಯನ ಹಾಗೆಯೇ ಮಳೆಯ ಹಾವಳಿಯಿಂದ ಗ್ರಾಮದ ಸುತ್ತೂ ಕಂದಕ ಅಗೆಯುವ ಕೆಲಸಕ್ಕೆ ಮೂರು ಲಕ್ಷ ವರಹ ಬೇಕೆಂದು ಕೇಳಿದನು. ಅವನಿಗೆ ಒಂದೂವರೆ ಲಕ್ಷ ವರಹ ಕೊಡಿಸಿದನು ರಾಜ.

ಆಮೇಲೆ ಸೀನಯ್ಯನ ಸರದಿ ಬಂತು. "ನಮ್ಮ ಗ್ರಾಮದ ಸುತ್ತಲೂ ಕಂದಕ ಅಗೆಸಬೇಕು. ಕೆರೆ ತೋಡಿಸಬೇಕು. ಗಣಕರಿಂದ ಅಳತೆ ಲೆಕ್ಕ ಮಾಡಿಸಿ ನೋಡಿದೆನು. ಅದಕ್ಕೆಲ್ಲ ಐವತ್ತು ಸಾವಿರ ವರಹ ಬೇಕಾಗುತ್ತದೆ ಪ್ರಭುಗಳೇ" ಎಂದನು.

ರಾಜನು ಆಶ್ಚರ್ಯದಿಂದ, "ಇದೇ ಈಗ ಒಬ್ಬರಿಗೆ ಕಂದಕದ ಕಾರ್ಯಕ್ಕೆ ಒಂದೂವರೆ ಲಕ್ಷ ವರಹಾ ಕೊಟ್ಟಿದ್ದೇನೆ. ನೀವಿಷ್ಟು ಕಡಿಮೆ ಕೇಳಲು ಕಾರಣವೇನು ? ನಿಮ್ಮ ಗ್ರಾಮ ಬಹಳ ಚಿಕ್ಕದೊ?" ಎಂದು ಕೇಳಿದನು.

"ನನ್ನ ಗ್ರಾಮವು ಅಷ್ಟೇನೂ ಚಿಕ್ಕದಲ್ಲ ಪ್ರಭೂ. ನಾವು ನಮ್ಮ ಅಗತ್ಯಗಳಿಗೆ ಪೂರ್ತಿಯಾಗಿ ರಾಜರ ಮೇಲೆ ಭಾರ ಹಾಕುವುದು ಸರಿಯಲ್ಲವೆಂದು ತೀರ್ಮಾನಿಸಿಕೊಂಡಿದ್ದೇವೆ. ನಮಗೆ ಬೇಕಾದುದು ಒಂದೂವರೆಲಕ್ಷ ವರಹಗಳಾದರೂ, ನಮ್ಮ ಗ್ರಾಮ ವಾಸಿಗಳೆಲ್ಲರೂ ಶ್ರಮದಾನ ಮಾಡುತ್ತಾರೆ. ಅದರಿಂದ ಲಕ್ಷ ವರಹ ಸರಿಹೋಗುತ್ತದೆ. ಅದರಲ್ಲಿ ಅರ್ಧದಷ್ಟು ನಾವೇ ಚಂದಾ ಎತ್ತಿ ಸರಿಪಡಿಸಿಕೊಳ್ಳುತ್ತೇವೆ. ಈ ಕಾರಣಗಳಿಂದ ತಮ್ಮಲ್ಲಿ ನಮಗೆ ಕೊರತೆ ಬೀಳುವ ಐವತ್ತು ಸಾವಿರ ವರಹಾ ಕೇಳಿದೆನು" ಎಂದನು ಸೀನಯ್ಯ.

ಅವನ ಮಾತು ಕೇಳಿ ರಾಜನು ಬಹಳ ಸಂತೋಷಪಟ್ಟು, "ಭಲೇ ! ನಿಮ್ಮದೊಂದು ಆದರ್ಶ ಗ್ರಾಮ ! ಎಲ್ಲ ಗ್ರಾಮಾಧಿಕಾರಿಗಳಿಗೂ ಆದರ್ಶಕರು ನೀವು. ನಿಮ್ಮ ಗ್ರಾಮಕ್ಕೆ ಎರಡು ಲಕ್ಷ ವರಹಗಳನ್ನು ಕೊಡುತ್ತೇನೆ" ಎಂದನು.

ತರುವಾಯ ರಾಜನು ಉಳಿದ ಎಲ್ಲಾ ಗ್ರಾಮಾಧಿಕಾರಿಗಳನ್ನೂ ನೋಡಿ, "ನಿಮ್ಮ ಗ್ರಾಮಗಳ ವಿಷಯದಲ್ಲಿ ನಾನೀಗ ಬದಲಾವಣೆ ಮಾಡಲು ನಿಶ್ಚಯಿಸಿದ್ದೇನೆ. ಪ್ರಸ್ತುತದಲ್ಲಿ ನಿಮಗಾರಿಗೂ ಹಣವನ್ನು ಕೊಡಲಾರೆನು. ನೀವು ಹೇಳಿದುದನ್ನೆಲ್ಲಾ ಕೇಳಿದ್ದೇನೆ. ಕೆಲವು ದಿನಗಳಲ್ಲಿ ನಾನು ಕಳುಹಿಸುವ ಉದ್ಯೋಗಸ್ಥರು ನಿಮ್ಮ ಗ್ರಾಮಗಳ ಕಡೆಗೆ ಬರುತ್ತಾರೆ. ಏನೇನು ಮಾಡಬೇಕೆಂಬುದನ್ನು ನಿರ್ಣಯಿಸುತ್ತಾರೆ. ಆಮೇಲೆ ನಿಮಗೆ ಧನ ಸಹಾಯ ಮಾಡುತ್ತೇನೆ. ಒಂದು ಸಂಗತಿ ನೆನಪಿಟ್ಟುಕೊಳ್ಳಿರಿ. ಇನ್ನು ಮೇಲೆ ನಾನು ನಿಮಗೆ ಕೊಡುವುದು ಸಾಲವಾಗಿಯೇ ಇರುತ್ತದೆ. ಅದು ಮುಗಿಯುವವರೆಗೂ ಗ್ರಾಮದ

ಪ್ರಜೆಗಳು, ವರ್ಷಾವರ್ಷ ಒಂದೊಂದು ಮನೆಯವರೂ ನೂರು ವರಹ ಪ್ರತ್ಯೇಕ ತೆರಿಗೆ ಕಟ್ಟಬೇಕು" ಎಂದನು.

ಇದನ್ನು ಕೇಳಿ ಗ್ರಾಮಾಧಿಕಾರಿಗಳೆಲ್ಲಾ ಹಾಹಾಕಾರ ಮಾಡಿದರು. ರಾಜನು ಅದಾವುದನ್ನೂ ಲಕ್ಷ್ಯ ಮಾಡದೆ ಸಭೆಯನ್ನು ಮುಗಿಸಿ ಸಿಂಹಾಸನದಿಂದಿಳಿದು ಹೋಗಿಬಿಟ್ಟನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ "ರಾಜಾ. ಧರ್ಮಾತ್ಮನೆಂದು ಹೆಸರು ಪಡೆದ ರಾಜನ ಪ್ರವರ್ತನೆ ಹಾಗೇಕೆ ಮಾರಕವಾಯಿತು? ರಂಗಪುರದ ಅಧಿಕಾರಿಯಾದ ಸೀನಯ್ಯನಿಗೆ ಎರಡು ಲಕ್ಷ ವರಹ ದಾನವಾಗಿ ಕೊಟ್ಟಂತೆ ಕೊಟ್ಟವನು, ಆ ಸಮಯದಲ್ಲಿ ಬೇರೆಯವರಿಗೆ ಸಾಲವಾಗಿಯೂ ಕೊಡದೆ, ಮುಂದೆ ಕೊಡುವ ಹಣದ ಸಾಲಕ್ಕೆ ಪ್ರತ್ಯೇಕ ತೆರಿಗೆ ಬೇರೆ ವಿಧಿಸಿದನಲ್ಲ? ಇದು ಕೇವಲ ಜಿಪುಣತನವಾಗುವುದಿಲ್ಲವೆ? ರಾಜನಲ್ಲಿ ಇಂತಹ ಬದಲಾವಣೆ ಥಕ್ಕನೆ ಬರಲು ಕಾರಣವೇನು? ಈ ಸಂದೇಹಕ್ಕೆ ತಕ್ಕ ಉತ್ತರ ತಿಳಿದೂ ಹೇಳದಿದ್ದರೆ ನಿನ್ನ ತಲೆ ಸಾವಿರ ಹೋಳಾಗುತ್ತದೆ!" ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ರಾಜನ ಪ್ರವರ್ತನೆಯಲ್ಲಿ ಥಕ್ಕನೆ ಬಂದ ಬದಲಾವಣೆಗೆ ಜಿಪುಣತನವು ಕಾರಣವೇನಲ್ಲ. ಸೀನಯ್ಯನು ತನ್ನ ಗ್ರಾಮಕ್ಕೆ ಅಗತ್ಯವಾದ ಹಣವನ್ನು ಕುರಿತು ಹೇಳಿ, ಅದರಲ್ಲಿಯು ಹೆಚ್ಚಿನ ಭಾಗವನ್ನು ಗ್ರಾಮದ ಪ್ರಜೆಗಳೇ ಹೇಗೆ ಸರಿಮಾಡಿಕೊಳ್ಳುವರೆಂಬುದನ್ನು ರಾಜನಿಗೆ ವಿವರಿಸಿದ್ದಾನೆ. ಆದರಿಂದ ರಾಜನಿಗೆ ಮುಖ್ಯವಾದೊಂದು ವಿಷಯ ಅರ್ಥವಾಯಿತು. ಅನೇಕ ಮಂದಿ ಗ್ರಾಮಾಧಿಕಾರಿಗಳು ತಮ್ಮ ಗ್ರಾಮದ ಅಗತ್ಯಗಳಿಗಿಂತಲೂ ಸ್ವಂತ ಲಾಭಕ್ಕಾಗಿ ರಾಜನ ಹತ್ತಿರ ಹಣವನ್ನು ಕೇಳಿ ಒಯ್ಯುತ್ತಾರೆ. ಆ ಕಾರಣದಿಂದ ರಾಜನು ದೇಶದೊಳಗಿನ ಎಲ್ಲಾ ಪ್ರಜೆಗಳಿಂದಲೂ ಹೆಚ್ಚಿನ ತೆರಿಗೆ ವಸೂಲು ಮಾಡಬೇಕಾಗಿ ಬರುತ್ತಿತ್ತು. ಹಾಗಿಲ್ಲದೆ ಸೀನಯ್ಯನು ಹೊಸ ವಿಧಾನವನ್ನು ವಿವರಿಸಿದ್ದಾನೆ. ಪ್ರತಿ ಗ್ರಾಮದವರೂ ಸಾಧ್ಯವಾದಷ್ಟು ಸ್ವಂತ ಶಕ್ತಿಯ ಮೂಲಕ ಗ್ರಾಮದ ಅಗತ್ಯಗಳನ್ನು ತೀರಿಸಿಕೊಳ್ಳುವುದರಿಂದ, ದೇಶದ ಮೊತ್ತ ಅಭಿವೃದ್ಧಿಗೆ ತಕ್ಕ ಯೋಜನೆಗಳನ್ನು ರಾಜನು ಮಾಡಿಸಬಹುದು. ಈ ಸಂಗತಿ ಉಳಿದ ಗ್ರಾಮಾಧಿಕಾರಿಗಳಿಗೂ ಅರ್ಥವಾಗುವ ಹಾಗೆ, ರಾಜನು ಧನಸಹಾಯದ ವಿಷಯದಲ್ಲಿ ಅವರಿಗೆ ಬಹು ಕಠಿಣವಾದ ಷರತ್ತುಗಳನ್ನು ಹಾಕಿದನು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.



# ಅಂಗರಕ್ಷಕ

**ಚಂ**ದ್ರಪುರದ ರಾಜನಿಗೆ ಒಬ್ಬ ಅಂಗರಕ್ಷಕನು ಬೇಕಾಯಿತು. ಆ ಪದವಿಗಾಗಿ ಬಂದ ಅಭ್ಯರ್ಥಿಗಳಲ್ಲಿ ನಾಲ್ವರು ಅರ್ಹರಾಗಿರುವಂತೆ ಮಂತ್ರಿಗೆ ತೋರಿತು. ಆ ನಾಲ್ವರೂ ಧೈರ್ಯದಲ್ಲಿ, ಸಾಹಸದಲ್ಲಿ, ಪರಾಕ್ರಮದಲ್ಲಿ ಸರಿಸಮಾನರಾಗಿದ್ದರು.

ಇನ್ನು ಅವರೊಳಗೆ ಅಂಗರಕ್ಷಕನಿಗೆ ಅಗತ್ಯವಾದ ಚುರುಕುತನವೂ, ಕಾರ್ಯದೀಕ್ಷೆಯೂ ಯಾರಿಗೆ ಹೆಚ್ಚೆಂದು ತಿಳಿಯಲು ಮಂತ್ರಿ ಪ್ರಯತ್ನಿಸಿದನು.

ಮಂತ್ರಿ ಅವರನ್ನು ನೋಡಿ, "ನಮ್ಮ ರಾಜರು ಪರಿವಾರದೊಂದಿಗೆ ಕೂಡಿ ಅರಣ್ಯದಲ್ಲಿ ಬೇಟೆಯಾಡುತ್ತ ದಾರಿ ತಪ್ಪಿದರು. ಆಗ ನಿಮ್ಮಲ್ಲಿ ಒಬ್ಬನು ರಾಜನೊಂದಿಗಿದ್ದು ಒಂದು ಮರದ ಕೆಳಗೆ ದಣಿವಾರಿಸಿಕೊಳ್ಳುತ್ತಿರುವಾಗ ಹಠಾತ್ತನೆ ಹೆಬ್ಬುಲಿಯೊಂದು ರಾಜರ ಮೇಲೆ ಹಾರಿತು. ಆಗ ನೀವೇನು ಮಾಡುವಿರಿ ?" ಎಂದು ಪ್ರಶ್ನಿಸಿದನು.

ಭೀಕರವಾಗಿ ಕೂಗಿ ಆ ಹುಲಿಯನ್ನು ಇದಿರಿಸುತ್ತೇನೆಂದು ಒಬ್ಬನೆಂದನು.

ಕತ್ತಿ ಹಿರಿದು ಹುಲಿಯ ಹಿಂದಿನಿಂದ ಹೋಗಿ ಅದನ್ನು ತಿವಿಯುತ್ತೇನೆಂದನಾ ಮತ್ತೊಬ್ಬ.

ತತ್ಕ್ಷಣವೇ ಹುಲಿಗೂ ರಾಜನಿಗೂ ಮಧ್ಯದಲ್ಲಿ ಹಾರಿ ಅದನ್ನು ಕ್ಷಣಮಾತ್ರದಲ್ಲಿ ಕೊಲ್ಲುತ್ತೇನೆಂದನು, ಮೂರನೆಯವನು ಅತ್ಯುತ್ಸಾಹದಿಂದ.

ಮಂತ್ರಿಯ ಪ್ರಶ್ನೆಯನ್ನು ಕೇಳಿ ಮುಗುಳುನಗುತ್ತ ನಿಂತ ನಾಲ್ಕನೆಯವನು, "ನಾನು ಪಕ್ಕದಲ್ಲಿರುವಾಗ ಹಠಾತ್ತಾಗಿ ಹೆಬ್ಬುಲಿ ಮಹಾರಾಜರ ಮೇಲೆ ಹಾರುವ ಸಂಭವವೇ ನಡೆಯದು. ಏಕೆಂದರೆ, ಅವರು ದಣಿವಾರಿಸಿಕೊಳ್ಳುವಾಗ ನಾನು ಸುತ್ತಲೂ ಕಿವಿ, ಕಣ್ಣು, ಕಾಲುಗಳನ್ನು ಪ್ರತ್ಯೇಕವಾಗಿ ಎಚ್ಚರದಲ್ಲಿರಿಸಿ ಕಾವಲು ಕಾಯುತ್ತಿರುತ್ತೇನೆ" ಎಂದನು.

ಮಂತ್ರಿ ಆ ನಾಲ್ಕನೆಯವನೇ ರಾಜನಿಗೆ ಅಂಗರಕ್ಷಕನಾಗಿರಲು ತಕ್ಕವನೆಂದು ತೀರ್ಮಾನಿಸಿದನು.






# ಮೂಲಕಾರಣ

ಹಿಂದೆ ಒಬ್ಬ ದೊಡ್ಡ ಜಮೀನ್ದಾರನು ಒಂದು ದಿನ ಸಭೆ ನಡೆಸಿಕೊಂಡು ಸಭಿಕರನ್ನು ನೋಡಿ ಹೀಗೊಂದು ಪ್ರಶ್ನೆ ಮಾಡಿದನು.

“ಈ ಪ್ರಪಂಚದಲ್ಲಿ ಎಲ್ಲಾ ಅನರ್ಥಗಳಿಗೂ ಮೂಲಕಾರಣ ಏನೆಂದು ಹೇಳಿದವರಿಗೆ ನೂರು ವರಹ ಬಹುಮಾನ ಕೊಡುತ್ತೇನೆ.”

ಬೆಲೆ ಬಾಳುವ ಈ ಪ್ರಶ್ನೆಗೆ ಸರಿಯಾದ ಉತ್ತರ ಕೊಡಲು ಸಭಿಕರು ತೀವ್ರವಾಗಿ ಆಲೋಚಿಸ ತೊಡಗಿದರು. ಅಹಂಕಾರವೆಂದರು ಕೆಲವರು. ಅಜ್ಞಾನವೆಂದರು ಕೆಲವರು. ಸುಳ್ಳು ಎಂದರು ಮತ್ತೆ ಕೆಲವರು. ಹೀಗೆ ಹಲವರು ಉತ್ತರ ಹೇಳಿದರು. ಜಮೀನ್ದಾರನಿಗೆ ಸರಿದೋರಲಿಲ್ಲ.

ಆಗ ರಾಮಚಂದ್ರನೆಂಬವನು ಎದ್ದು, “ಸರಿಯಾದ ಉತ್ತರವೇನೆಂದು ನನಗೆ ಗೊತ್ತಿದೆ. ಬಹುಮಾನದ ಮೊತ್ತವು ಬಹಳ ಕಡಿಮೆಯಾದುದರಿಂದ ಅದನ್ನು ಹೇಳಬಾರದೆಂದಿದ್ದೇನೆ” ಎಂದನು.

ಕೂಡಲೇ ಜಮೀನ್ದಾರನು “ನನ್ನ ಮನಸ್ಸಿಗೆ ಸರಿಯೆನಿಸುವ ಉತ್ತರ ಹೇಳಿದವರಿಗೆ ಇನ್ನೂರು ವರಹಗಳನ್ನು ಕೊಡುತ್ತೇನೆ” ಎಂದನು.

ಆಗ ರಾಮಚಂದ್ರನು “ಹಾಗಾದರೆ ಹೇಳುತ್ತೇನೆ- ಈ ಪ್ರಪಂಚದಲ್ಲಿ ಎಲ್ಲಾ ಅನರ್ಥಗಳಿಗೂ ಮೂಲ ಕಾರಣವು ಹಣವೇ” ಎಂದು ಆಮೇಲೆ ಹಣಕ್ಕಾಗಿ ಪ್ರಪಂಚದಲ್ಲಿ ಎಂತೆಂತಹ ಅನ್ಯಾಯಗಳೂ, ಹತ್ಯೆಗಳೂ, ಯುದ್ಧಗಳೂ ನಡೆಯುತ್ತವೆಂಬುದನ್ನು ಕಣ್ಣಿಗೆ ಕಟ್ಟುವ ಹಾಗೆ ವಿವರಿಸಿದನು.

ಅದನ್ನೆಲ್ಲ ಕೇಳಿ ಜಮೀನ್ದಾರನು “ನಿನ್ನ ಸಮಾಧಾನವು ಹೇಗೇ ಇದ್ದರೂ ನಿನ್ನ ವಿವರಣೆ ನನಗೆ ಹಿಡಿಸಿತು. ನೀನು ದೊಡ್ಡ ಕಥೆಗಾರನೇ ಸರಿ. ಕಣ್ಣಿಗೆ ಕಟ್ಟುವ ಹಾಗೆ ಹೇಳುವಿ!” ಎಂದು ಮೆಚ್ಚಿ, ಇನ್ನೂರು ವರಹಗಳನ್ನು ಅವನಿಗೆ ಕೊಟ್ಟನು.

ಆ ಸಭೆಯಲ್ಲಿ ಕುತ್ಸಿತನೆಂಬವನೊಬ್ಬನಿದ್ದನು. ಅವನ ನಿಜವಾದ ಹೆಸರು ಏನೆಂದು ಯಾರಿಗೂ ತಿಳಿಯದು. ಅವನ ಸ್ವಭಾವದಿಂದಾಗಿ ಎಲ್ಲರೂ ಅವನನ್ನು ಕುತ್ಸಿತನೆಂದೇ ಕರೆಯುತ್ತಿದ್ದರು. ಅವನಿಗೂ ಆ ಹೆಸರು ಅಭ್ಯಾಸವಾಗಿತ್ತು.

ಈಗ ಅವನು ಸಭೆಯಲ್ಲಿ ತಟಕ್ಕನೆ ಎದ್ದು, “ರಾಮಚಂದ್ರನು ಈ ಸಭೆಯಲ್ಲಿದ್ದ ಎಲ್ಲರನ್ನೂ ಮೋಸಪಡಿಸಿದ್ದಾನೆ. ಎಲ್ಲಾ ಅನರ್ಥಗಳಿಗೂ ಹಣವೇ

ಶ್ರೀ ರಾಮುಕಮಲ್

ಮೂಲಕಾರಣವೆಂದವನು, ತನ್ನ ಉತ್ತರಕ್ಕೆ ಬಹುಮಾನವಾಗಿ ಹೆಚ್ಚಿಗೆ ಹಣವನ್ನು ಏಕೆ ಕೇಳಿದ ? ಅಂದರೆ ಅವನು ತಾನು ಹೇಳಿದ ಉತ್ತರವನ್ನು ನಂಬುವುದಿಲ್ಲವೆಂತಲೇ ಆಯಿತು. ನಂಬುವವನಾದರೆ ಬಹುಮಾನವೇ ಬೇಡವೆನ್ನಬೇಕಿತ್ತು. ತಾನು ನಂಬದ ವಿಷಯವನ್ನು ನಮ್ಮೆಲ್ಲರಿಂದಲೂ ನಂಬಿಸಲು ನೋಡುವುದು ಮೋಸವೆಲ್ಲವೇನು ?" ಎಂದನು.

"ಕೇಳಿದೆಯಾ ರಾಮಚಂದ್ರಾ. ಇದಕ್ಕೆ ನಿನ್ನ ಸಮಾಧಾನವೇನು ?" ಎಂದು ಜಮೀನ್ದಾರನು ಕೇಳಿದನು.

"ಮನುಷ್ಯನು ಹಣವು ಅನರ್ಥಕಾರಿ ಎಂದು ತಿಳಿದಿದ್ದರೂ ಹಣದ ಮೇಲೆ ಆಶೆಯಿಟ್ಟಿರುತ್ತಾನೆ. ಅದಿಲ್ಲದೆ ಯಾವ ವ್ಯವಹಾರವೂ ಸಾಗದು. ಆದುದರಿಂದ ಅದು ಮತ್ತಷ್ಟು ಅನರ್ಥಕ್ಕೆ ಕಾರಣವೇ ಆಗುತ್ತದೆ" ಎಂದನು ರಾಮಚಂದ್ರ.

ಆಗ ಕುತ್ಸಿತನೊಬ್ಬನ ಹೊರತು ಸಭೆಯವರೂ ಜಮೀನ್ದಾರರೂ ಸಹ ಚಪ್ಪಾಳೆ ತಟ್ಟಿದರು.

ಆಗ ಕುತ್ಸಿತನು ಬಿಡದೆ, "ಅನರ್ಥವೆಂದು ತಿಳಿದೂ ಹಣದ ಮೇಲೆ ಆಶೆಯುಳ್ಳವನು ಮೂರ್ಖನೇ ಸರಿ. ನೀನು ಮೂರ್ಖನೋ ?" ಎಂದು ರಾಮಚಂದ್ರನನ್ನು ಕೇಳಿದನು. ಅದನ್ನು ಕೇಳಿ ರಾಮಚಂದ್ರನು ಕುತ್ಸಿತನನ್ನು ತೀಕ್ಷ್ಣವಾಗಿ ನೋಡಿ, "ನೀನು ನಿನ್ನ ಜೀವನವನ್ನು ಶಾಶ್ವತವೆಂದು ಕೊಳ್ಳುವಿಯಾ ?" ಎಂದು ಕೇಳಿದನು.

"ಎಷ್ಟು ಮಾತ್ರಕ್ಕೂ ಇಲ್ಲ" ಎಂದನು ಕುತ್ಸಿತ.

"ನಿನ್ನ ಮರಣವು ನಿನಗೆ ತಿಳಿದು ಬರುತ್ತದೋ, ತಿಳಿಯದೆ ಬರುತ್ತದೋ ?" ಎಂದು ರಾಮಚಂದ್ರನು ಮತ್ತೊಂದು ಪ್ರಶ್ನೆ ಮಾಡಿದನು.

"ಯಾರಿಗಾದರೂ ತಿಳಿಯದಂತೆಯೇ ಮರಣ ಬರುತ್ತದೆ. ನನಗೂ ಅಷ್ಟೇ," ಎಂದನು ಕುತ್ಸಿತ ಕೋಪದಿಂದ.

"ಹಾಗಾದರೆ ನಿನಗೆ ಇನ್ನೂ ಬದುಕಬೇಕೆಂದಿದೆಯೋ ಸಾಯಬೇಕೆಂದಿದೆಯೋ ?" ಎಂದು ರಾಮಚಂದ್ರನು ಮತ್ತೊಂದು ಪ್ರಶ್ನೆ ಮಾಡಿದನು.

"ನೀನೇನು ಅಂದುಕೊಂಡಿರುವಿ ?" ಎಂದು ಕುತ್ಸಿತನು ಇದಿರು ಪ್ರಶ್ನೆ ಹಾಕಿದನು.

"ನಾನು ಮೂರ್ಖನೆಂದು ಹೇಳಿದ್ದಾಯಿತು. ಬದುಕಬೇಕೆಂತಲೇ ಇದ್ದೇನೆ. ನಿನ್ನ ಸಂಗತಿ ಏನೆಂದು ಸ್ಪಷ್ಟ ಹೇಳಿ ಬಿಡು" ಎಂದನು ರಾಮಚಂದ್ರ.

ಅದನ್ನು ಕೇಳಿ ಸಭಿಕರೆಲ್ಲಾ ಗೊಳ್ಳನೆ ನಗಾಡತೊಡಗಿದರು. ಅವಮಾನದಿಂದ ಬಾಯಿ ಬಿದ್ದು ಹೋದ ಕುತ್ಸಿತನು ತಲೆ ಬಗ್ಗಿಸಿಕೊಂಡನು.

ಜಮೀನ್ದಾರನು ರಾಮಚಂದ್ರನನ್ನು ಇನ್ನಷ್ಟು ಘನವಾಗಿ ಸನ್ಮಾನ ಮಾಡಿದನು.





# ವಕ್ರಬುದ್ಧಿ

ಬ್ರಹ್ಮದತ್ತನು ಕಾಶೀನಗರವನ್ನು ಪಾಲಿಸಿಕೊಂಡಿದ್ದ ಕಾಲದಲ್ಲಿ ಒಂದಾನೊಂದು ಗ್ರಾಮದಲ್ಲಿ ಒಬ್ಬ ಬ್ರಾಹ್ಮಣನಿದ್ದನು. ಅವನು "ವೇದಭಂ" ಎಂಬ ವಿಶೇಷ ಮಂತ್ರವನ್ನು ಸಾಧಿಸಿಕೊಂಡವನು. ಆ ಮಹಾ ಮಂತ್ರದ ಮಹತ್ತು ಏನೆಂದರೆ, ಗ್ರಹಗಳೆಲ್ಲವೂ ಒಂದೇ ಕೂಟವಾಗಿ ಕೂಡಿಕೊಂಡ ಕಾಲದಲ್ಲಿ ಆ ಮಂತ್ರವನ್ನು ಪುನಶ್ಚರಣ ಮಾಡಿದರೆ ಆಕಾಶದಿಂದ ಚಿನ್ನ, ಬೆಳ್ಳಿ, ಮುತ್ತು, ಹವಳ, ರತ್ನ, ಮಾಣಿಕ್ಯ ಮಣಿಗಳು ಮಳೆ ಬೀಳುವ ಹಾಗೆ ಸ್ವಲ್ಪ ಹೊತ್ತು ಬೀಳುವುವು. ಇಂತಹ ಗ್ರಹಯೋಗ ಸೇರುವುದು ಅತ್ಯಪೂರ್ವವೆನ್ನಬಹುದು.

ಇಂತಹ ಮಂತ್ರ ಸಿದ್ಧನಾದ ಈ ಬ್ರಾಹ್ಮಣನ ಆಶ್ರಮದಲ್ಲಿ ಬೋಧಿಸತ್ವನು ಅವನ ಶಿಷ್ಯನಾಗಿದ್ದನು. ಎಲ್ಲಾ ಶಿಷ್ಯರಿಗಿಂತಲೂ ಬೋಧಿಸತ್ವನ ಮೇಲೆ ಆ ಬ್ರಾಹ್ಮಣನು ಹೆಚ್ಚು ಪ್ರಿಯವುಳ್ಳವನಾಗಿದ್ದನು. ಒಂದು ದಿನ ಗುರು ಬ್ರಾಹ್ಮಣನು ತನ್ನ ಪ್ರಿಯ ಶಿಷ್ಯನನ್ನು ಕರೆದುಕೊಂಡು, ಎಲ್ಲಿಗೋ ಪ್ರಯಾಣ ಮಾಡುತ್ತ ಒಂದು ಅರಣ್ಯವನ್ನು ಸೇರಿದನು. ಸ್ವಲ್ಪ ದೂರದವರೆಗೆ ಅರಣ್ಯಮಾರ್ಗ ಸಾಗುತ್ತಿತ್ತು.

ಆ ಅರಣ್ಯದಲ್ಲಿ ಐನೂರು ಮಂದಿ ಕಳ್ಳರು ಅಡಗಿದ್ದರು. ಅವರು ಗುರುಶಿಷ್ಯರಿಬ್ಬರನ್ನೂ ಅಟಕಾಯಿಸಿ ನಿಂತರು. ಗುರುಶಿಷ್ಯರಲ್ಲಿ ದೋಚಿಕೊಳ್ಳುವಂತಹುದು ಏನೂ ಇಲ್ಲದಿದ್ದರೂ ಆ ಕಳ್ಳರು ಬಿಡಲಿಲ್ಲ. ಆ ಕಳ್ಳರು ಒಂದು ನಿಯಮವಿಟ್ಟುಕೊಂಡಿದ್ದರು. ಇಬ್ಬರು ಪ್ರಯಾಣಿಕರು ಕೂಡಿ ಆ ದಾರಿಯಾಗಿ ಹೋಗುತ್ತಿದ್ದರೆ ಒಬ್ಬನು ಮನೆಗೆ ಹೋಗಿ ಕಳ್ಳರ ನಿರ್ದಿಷ್ಟ ರುಸುಮಿನ ಹಣವನ್ನು ತಂದುಕೊಟ್ಟು ಇನ್ನೊಬ್ಬನನ್ನು ಬಿಡಿಸಿಕೊಳ್ಳಬೇಕು. ಸಾಧ್ಯವಿಲ್ಲವೆಂದರೆ ಇಬ್ಬರನ್ನೂ ಕೊಂದುಬಿಡುವರು.

ಅವರಲ್ಲಿ ತಂದೆಯೂ ಮಗನೂ ಇದ್ದರೆ ತಂದೆ ಮನೆಗೆ ಹೋಗಿ ರುಸುಮಿನ ಹಣ ತಂದುಕೊಟ್ಟು ಮಗನನ್ನು ಬಿಡಿಸಿಕೊಳ್ಳಲು ಅವಕಾಶ ಮಾಡುತ್ತಾರೆ. ಹಾಗೆಯೇ ತಾಯಿಯೂ ಮಗಳೂ ಆದರೆ ತಾಯಿಯನ್ನೂ, ಸೋದರರಾಗಿದ್ದರೆ ಅವರಲ್ಲಿ ಒಬ್ಬನನ್ನೂ, ಗುರುಶಿಷ್ಯರಾದರೆ ಶಿಷ್ಯನನ್ನೂ ರುಸುಮಿನ ಹಣ ತರಲು ಕಳುಹಿಸುವುದು ಆ ಕಳ್ಳರ ಕ್ರಮ. ಹಣವನ್ನು ಅವರು ಹೇಳಿದಷ್ಟು ತಾರದಿದ್ದರೆ ಒಬ್ಬರನ್ನು ಕೊಂದು, ಇನ್ನೊಬ್ಬನನ್ನು ಓಡಿಸುವರು.



ಇಂತಹ ವಿಚಿತ್ರ ಪದ್ಧತಿಯ ಆ ಕಳ್ಳರು ಬ್ರಾಹ್ಮಣನನ್ನು ತಮ್ಮ ಹತ್ತಿರ ಇಟ್ಟುಕೊಂಡು ಶಿಷ್ಯನಾದ ಬೋಧಿಸತ್ವನನ್ನು ಹತ್ತು ಸಾವಿರ ವರಹ ಗಳಷ್ಟು ಹಣವನ್ನು ತರಲು ಹೇಳಿ, ನಿಯಮ ಗಳನ್ನು ತಿಳಿಸಿ. ಹೋಗುವಂತೆ ಬಿಟ್ಟರು.

ಹೋಗುವ ಮೊದಲು ಬೋಧಿಸತ್ವನು ಗುರುವಿಗೆ ನಮಸ್ಕಾರ ಮಾಡಿ, ರಹಸ್ಯವಾಗಿ " ಗುರುವರ್ಯಾ, ಹೆದರಬೇಡಿರಿ, ಎರಡು ದಿನಗಳೊಳಗೆ ಹಣದೊಂದಿಗೆ ಹಿಂದಿರುಗಿ ಬರುತ್ತೇನೆ. ನನ್ನದೊಂದು ವಿನಂತಿ ಯನ್ನು ಮಾತ್ರ ದಯವಿಟ್ಟು ಕೇಳಬೇಕು. ಈ ದಿನ ಗ್ರಹಗಳೆಲ್ಲವೂ ಒಂದೇ ಕೂಟವಾಗಿ ಸೇರುವ ದಿನ. ಅದನ್ನು ಉಪಯೋಗಪಡಿಸಿ ಈ ಕಳ್ಳರಿಂದ ಬಿಡುಗಡೆಯಾಗಲಿಕ್ಕೆ ಮಾತ್ರ ನೋಡಿಬಿಡಬೇಡಿ. ಹಾಗೆಲ್ಲಾ ಮಾಡಿಬಿಟ್ಟರೆ ನಿಮಗೂ ಈ ಕಳ್ಳರಿಗೂ ಸಹ ತೀರದ ಮುಪ್ಪು ಬರಬಹುದು. ಈ ವರ್ಷದ ಧನವರ್ಷಣಯೋಗ ವ್ಯರ್ಥವಾದರೆ ಆಗಲಿ. ಮುಂದೆ ಎಂದಾದರೂ ಬಂದೇ ಬರುತ್ತೆ" ಎಂದು ಒತ್ತಿ ಹೇಳಿ ಬೋಧಿಸತ್ವನು ಹೊರಟುಹೋದನು.

ಸ್ವಲ್ಪ ಹೊತ್ತಿನ ಮೇಲೆ ಸೂರ್ಯಾಸ್ತಮಾನ ವಾಯಿತು. ಕಳ್ಳರು ಬ್ರಾಹ್ಮಣನನ್ನು ಬಂಧಿಸಿ ತಮ್ಮ ನಡುವೆ ಇಟ್ಟುಕೊಂಡಿದ್ದರು. ಆಕಾಶದಲ್ಲಿ ಹುಣ್ಣಿಮೆಯ ಚಂದ್ರ ಪ್ರಕಾಶವು ಬಹು ಶುಭ್ರವಾಗಿ ಸುತ್ತಲೆಲ್ಲಾ ಹರಡಿಕೊಂಡಿದ್ದಿತು. ಬ್ರಾಹ್ಮಣನು ಆಕಾಶವನ್ನೂ ಚಂದ್ರನನ್ನೂ ನೋಡುತ್ತಾ ಯೋಚನೆಗೆ ಬಿದ್ದನು. ಆ ಬಂಧನದಲ್ಲಿ ಪ್ರತಿ ನಿಮಿಷವೂ ಅವನಿಗೆ ಬಾಧೆಯಾಗಿದ್ದಿತು. ಶಿಷ್ಯನು ತಿರುಗಿ ಬರಲು ಹೇಗೂ ಎರಡು ದಿನಗಳಾಗುತ್ತವೆ. ಆಕಾಶದಲ್ಲಿ ಗ್ರಹಕೂಟಗಳು ಸೇರುತ್ತಾ ಇವೆ. ಈ ಕಳ್ಳರ ಕೈಗೆ ಸಿಕ್ಕಿಕೊಂಡು ಕೈಲಾಗದವನ ಹಾಗೆ ಇವರ ಹಿಂಸೆಗಳನ್ನೆಲ್ಲ ನಾನೇಕೆ ಅನುಭವಿಸಬೇಕು ? ಕೈಯೊಳಗಿರುವ ಮಂತ್ರವನ್ನು ಪಠಿಸಿ, ಕನಕವರ್ಷಣ ಗರೆಸಿಬಿಟ್ಟರೆ, ಘನವಾದ ಧನದ ರಾಶಿಯ ರುಸುಮನ್ನು ನೋಡಿ ಈ ಕಳ್ಳರು ಬಹು ಗೌರವದಿಂದ ನನ್ನನ್ನು ಬಿಟ್ಟು ಬಿಡುತ್ತಾರೆ" ಎಂದುಕೊಂಡನು. ಹುಡುಗ ನಾದ ಶಿಷ್ಯನ ಬೋಧನೆಯಲ್ಲಿ ತಿರುಳಿರುವಂತೆ ಅವನಿಗೆ ತೋರಲಿಲ್ಲ.

ಅಂತೆಯೇ ಬ್ರಾಹ್ಮಣನು ಕಳ್ಳರ ಗುಂಪನ್ನು ನೋಡಿ, "ನೀವು ನನ್ನನ್ನು ಏಕೆ ಬಂಧಿಸಿರುತ್ತೀರಿ ? ಕೇವಲ ಹಣಕ್ಕಾಗಿ ತಾನೇ ? ಬೇರೆ ಉದ್ದೇಶವೇನಿಲ್ಲ ವಷ್ಟೆ ? " ಎಂದನು.

"ಹೌದು ಹೌದು. ಹಣಕ್ಕಾಗಿಯೇ. ಕಡೇ ಪಕ್ಷ ಐದು ಸಾವಿರ ವರಹಗಳನ್ನಾದರೂ ನಿಮ್ಮ ಶಿಷ್ಯ ತರಲೇಬೇಕು. ಅದಕ್ಕಿಂತ ಕಡಿಮೆಗೆ ಕ್ಷಮೆ ಇಲ್ಲ" ಎಂದರು ಕಳ್ಳರು.

"ಅಷ್ಟೇನಾ ! ನಾನು ಹೇಳಿದ ಹಾಗೆ ಮಾಡಿದರೆ ನಿಮ್ಮ ಒಬ್ಬೊಬ್ಬರಿಗೂ ಸಾವಿರಕ್ಕಿಂತ ಹೆಚ್ಚೇ ಸಿಗುತ್ತದೆ. ಮೊದಲು ನನ್ನ ಕಟ್ಟು ಬಿಚ್ಚಿಬಿಡಿರಿ.

ನನ್ನನ್ನು ಶುಭ್ರವಾಗಿ ಸ್ನಾನಮಾಡಿಸಿರಿ. ಹೊಸ ವಸ್ತ್ರ ಉಡಿಸಿರಿ. ಪುಷ್ಪ ಜಾತಿಗಳನ್ನೆಲ್ಲಾ ತಂದು ಇಲ್ಲಿ ಸೇರಿಸಿರಿ. ಧೂಪ, ದೀಪ, ಪರಿಮಳ ದ್ರವ್ಯಗಳನ್ನು, ಪೂಜೆಗೆ ಬೇಕಾದ ಸಾಮಾಗ್ರಿಗಳನ್ನು ಇಲ್ಲಿ ತರಿಸಿಡಿರಿ. ಆಮೇಲೆ ಏನು ನಡೆಯುವುದೆಂದು ಪ್ರತ್ಯಕ್ಷವಾಗಿ ನೋಡುವಿರಂತೆ ! ಹುಂ, ತ್ವರೆಮಾಡಿರಿ !" ಎಂದನು ಬ್ರಾಹ್ಮಣ.

ಕಳ್ಳರು ಬ್ರಾಹ್ಮಣನು ಹೇಳಿದ ಹಾಗೆಯೇ ಮಾಡಿದರು. ಪೂಜಾದ್ರವ್ಯಗಳೆಲ್ಲಾ ಅವರ ಹತ್ತಿರ ವಿದ್ದುವು, ಪೂಜೆ ಮುಗಿದ ಮೇಲೆ ಬ್ರಾಹ್ಮಣನು ಆಕಾಶದ ಕಡೆಗೆ ದೃಷ್ಟಿ ಸಾರಿಸಿ "ವೇದಭ" ಮಂತ್ರ ವನ್ನು ಪಠಿಸುತ್ತ ನಾಲ್ಕು ಸುತ್ತಲೂ ಕೈಜೋಡಿ ಸುತ್ತಿರಲು, ಆಕಾಶದಿಂದ ಗಲಗಲನೆ ಮಣಿಗಳು ಉದುರತೊಡಗಿದುವು. ಚಿನ್ನ ಬೆಳ್ಳಿಯ ತುಂಡುಗಳೂ ಮಣಿಗಳೂ ಸ್ವಲ್ಪಹೊತ್ತು ಉದುರಿದುವು. ಕಳ್ಳರು ಸಂಭ್ರಮಾಶ್ಚರ್ಯಗಳಿಂದ ಪುಲಕಿತರಾಗಿ ಬೇಗ ಬೇಗನೇ ಅವೆಲ್ಲವನ್ನೂ ಆರಿಸಿ ಗಂಟು ಕಟ್ಟಿ ಕೊಂಡು ಹೊರಡುವಾಗ, ಬ್ರಾಹ್ಮಣನನ್ನೂ ತಮ್ಮೊಂದಿಗೆ ಕರೆದರು.

"ನಾನೇಕೆ ? ನಿಮಗೆ ಬೇಕಾದ್ದು ಸಿಕ್ಕಿತಲ್ಲ ?" ಎಂದನು ಬ್ರಾಹ್ಮಣ.

"ಇವೆಲ್ಲಾ ಮಂತ್ರದ ಸರಕುಗಳು. ಇವು ನಮ್ಮ ಉಪಯೋಗಕ್ಕೆ ಬರುತ್ತವೋ ಇಲ್ಲವೋ ನೋಡಿ ಆಮೇಲೆ ನಿಮ್ಮನ್ನು ಬಿಡುತ್ತೇವೆ, ನಡೆಯಿರಿ" ಎಂದರು ಕಳ್ಳರು.

ಉಪಾಯವಿಲ್ಲದೆ ಬ್ರಾಹ್ಮಣನು ಅವರೊಂದಿಗೆ ಹೋಗಬೇಕಾಯಿತು.

ಸ್ವಲ್ಪ ದೂರ ಹೋದಾಗ ಮತ್ತೊಂದು ದೊಡ್ಡ ಕಳ್ಳರ ಗುಂಪು ಭಯಂಕರವಾದ ಮಾರಣಾಯುಧ ಗಳೊಂದಿಗೆ ಅಡ್ಡ ಬಂದು, ಮೊದಲನೇ ಗುಂಪನ್ನು ಅಟಕಾಯಿಸಿತು.



"ನಮ್ಮನ್ನೇಕೆ ಅಡ್ಡ ಗಟ್ಟುವಿರಿ ?" ಎಂದು ಮೊದಲನೇ ಗುಂಪಿನವರು ಕೇಳಲು, "ಇನ್ನೇಕೆ ? ಹಣಕ್ಕಾಗಿಯೇ ! ಒಳ್ಳೆಯ ಮಾತಿನಲ್ಲಿ ನಿಮ್ಮ ಗಂಟನ್ನೆಲ್ಲಾ ಕೆಳಗಿಟ್ಟು ಬರಿಗೈಯಲ್ಲಿ ಹೋಗಿರಿ !" ಎಂದರು ಎರಡನೇ ಗುಂಪಿನವರು.

"ಅಷ್ಟೇತಾನೇ ? ಇದೋ ಈ ಮಂತ್ರಸಿದ್ಧ ಬ್ರಾಹ್ಮಣನನ್ನು ಕೇಳಿರಿ. ಇವರು ಆಕಾಶ ನೋಡಿ ಕೈಮುಗಿದರೆ ಸಾಕು, ಬೆಲೆ ಬಾಳುವ ಚಿನ್ನ ಮಣಿ ಮಾಣಿಕ್ಯಗಳೆಲ್ಲವೂ ಮಳೆಯ ಹಾಗೆ ಬೀಳುತ್ತವೆ. ಹಾಗೆ ಮಾಡಿಯೇ ಈ ಧನವನ್ನೆಲ್ಲಾ ಮಳೆಯ ಹಾಗೆ ಸುರಿಸಿ ನಮಗೆ ಕೊಟ್ಟಿದ್ದಾರೆ" ಎಂದರು ಮೊದಲನೆಯವರು.

"ಹೌದೇ !" ಎಂದು ಎರಡನೇ ಗುಂಪಿನವರು ಬ್ರಾಹ್ಮಣನನ್ನು ಕೇಳಿದರು.

"ಹೌದು. ಆದರೆ..." ಎಂದು ಮುಂದೇನೂ ಹೇಳಲು ತೋರದೆ ಮೂಕನಾದನು ಬ್ರಾಹ್ಮಣ.



"ಉಪಚರಿಸಿ ಕೇಳಿ ಪಡೆಯಿರಿ" ಎಂದು ಮೊದಲನೆ ಗುಂಪಿನವರು ಹೊರಟುಹೋದರು. ಬ್ರಾಹ್ಮಣನು ಎರಡನೇ ಗುಂಪಿನವರ ಕೈಗೆ ಸಿಕ್ಕಿಬಿದ್ದನು.

"ಹುಂ, ನಮಗೂ ಧನ ಬರುವ ಹಾಗೆ ಮಾಡಿ ರಯ್ಯಾ, ಬ್ರಾಹ್ಮಣೋತ್ತಮರೇ !" ಎಂದು ಕಳ್ಳರು ಕೂಗಿ ಕೂಗಿ ಪೀಡಿಸತೊಡಗಿದರು.

ಬ್ರಾಹ್ಮಣನು ನಿರುಪಾಯನಾಗಿ ದೀನತೆಯಿಂದ, "ಅಯ್ಯಗಳಿರಾ ! ಈ ಮೊದಲು ನಾನು ಆ ಕಳ್ಳರಿಗೆ ಕೊಟ್ಟದ್ದು ಮಂತ್ರಮಹಿಮೆಯಿಂದ ಬರಮಾಡಿಸಿದ ಧನವೇ ಹೊರತು ಬೇರೆಯೇನಲ್ಲ. ಇನ್ನು ಒಂದು ವರ್ಷದ ಮೇಲೆಯಷ್ಟೇ ಆ ಮಂತ್ರಕ್ಕೆ ಶಕ್ತಿ ಬರುತ್ತದೆ. ಇದು ನನ್ನ ಇಷ್ಟ ಬಂದ ಹಾಗೆ ಉಪಯೋಗಿಸುವ ಮಂತ್ರವಲ್ಲ. ಇದಕ್ಕೆ ಗ್ರಹ ಕೂಟ ಸೇರಬೇಕು. ಇವತ್ತಿನ ಗ್ರಹ ಕೂಟ ಬಿಟ್ಟು ಹೋದಾಯಿತು. ಇನ್ನು ಒಂದು ವರ್ಷದ ವರೆಗೆ ಗ್ರಹ ಕೂಟ ಸೇರಲಾರದು. ಒಂದು ವರ್ಷದ ಮೇಲೆ ಗ್ರಹ ಕೂಟ ಸೇರಿದಾಗ ತಪ್ಪದೆ ನಿಮಗೆ ಧನರಾಶಿ ಬರಿಸುತ್ತೇನೆ" ಎಂದನು.

ಕಳ್ಳರು ಅವನ ಮಾತನ್ನು ನಂಬಲಿಲ್ಲ. "ನಮಗಿಂತ ಮೊದಲು ಬಂದವರನ್ನು ಕುಬೇರರಾಗುವ ಹಾಗೆ ಮಾಡಿ ಕಳುಹಿಸಿ, ನಮ್ಮನ್ನು ಒಂದು ವರ್ಷದವರೆಗೆ ಕಾಯಬೇಕೆನ್ನುವೆಯಾ ? ಬೊಂಕು ಬಾಯಿ ಬ್ರಾಹ್ಮಣಾ !" ಎಂದು ಹರಿತವಾದ ಕತ್ತಿಗಳಿಂದ ಆ ಬ್ರಾಹ್ಮಣನನ್ನು ಹಿಂಸಿಸಲು, ಬ್ರಾಹ್ಮಣನು ಹೊರಳಿ ನರಳಿ ಸತ್ತುಬಿದ್ದನು. ಅವರು ಅವನ ಕಳೇಬರವನ್ನು ದಾರಿಯ ಬದಿಯಲ್ಲಿದ್ದ ಮರದ ಕೊಂಬೆಗೆ ನೇತಾಡಿಸಿದರು.

ಆಮೇಲೆ ಆ ಕಳ್ಳರೆಲ್ಲರೂ ಬೇಗಬೇಗನೆ ಅತ್ಯಾವೇಶದಿಂದ ಓಡುತ್ತಾ ಹೋಗಿ ಮೊದಲನೇ ಕಳ್ಳರ ಗುಂಪನ್ನು ತೂರಿ, ಅವರೆಲ್ಲರನ್ನೂ ಕೊಂದು, ಅವರ ಕೈಯಲ್ಲಿದ್ದ ಧನ ದ್ರವ್ಯಾದಿ ಸರ್ವಸ್ವವನ್ನೂ ತಾವೇ ಅಪಹರಿಸಿದರು.

ಅದನ್ನು ತಮ್ಮೊಳಗೆ ಹಂಚುವಾಗ ಹಂಚಿಕೆ ಸರಿಯಾಗದೆ ಅವರಲ್ಲಿ ಎರಡು ಕಕ್ಷಿಗಳಾದುವು. ಆ ಎರಡು ಗುಂಪಿನವರೊಳಗೆ ಜಿದ್ದು ಹೆಚ್ಚಿ, ಮತ್ತೆ ಹೋರಾಟ ಪ್ರಾರಂಭವಾಯಿತು. ಈ ಹೋರಾಟದಲ್ಲಿ ನೂರಾರು ಮಂದಿ ಕಡಿದುಕೊಂಡು ಸತ್ತ ಮೇಲೆ ಕಡೆಗೆ ಇಬ್ಬರಷ್ಟೇ ಉಳಿದರು. ಅವರಿಬ್ಬರೂ ಬುದ್ಧಿ ತಂದುಕೊಂಡು ಸ್ನೇಹಿತರಾಗಿರೋಣವೆಂದು ಮಾತಾಡಿ, ಧನವನ್ನೆಲ್ಲಾ ಸಮೀಪದಲ್ಲಿ ಒಂದು ಕಡೆ ಅರಣ್ಯದ ನಡುವೆ ಅಡಗಿಸಿಟ್ಟರು. ಆಗ ಇಬ್ಬರಿಗೂ ಹೊಟ್ಟೆಯಲ್ಲಿ ಹಸಿವೆಯ ಬೆಂಕಿ ಭಗಭಗಿಸಿಕೊಂಡಿತ್ತು. ಒಬ್ಬನು ಬಿಚ್ಚುಗತ್ತಿಯೊಂದಿಗೆ ಧನವನ್ನು ಕಾಯಲು ನಿಂತನು. ಮತ್ತೊಬ್ಬನು ಆಹಾರ ಪದಾರ್ಥಗಳನ್ನು ತರಲು ಊರೊಳಗೆ ಹೋದನು.

ಧನರಾಶಿಯನ್ನು ಕಾದುಕೊಂಡಿದ್ದ ಕಳ್ಳ, "ನನ್ನ ಗೆಳೆಯ ಬಂದರೆ ಸುಮ್ಮನೆ ಸಿಕ್ಕಿದ ಇಷ್ಟೂ ಧನದಲ್ಲಿ

ಅರ್ಧಭಾಗ ಕಬಳಿಸಿಕೊಂಡು ಹೋಗುವನಲ್ಲ! ಹಾಗಾಗಬಾರದು. ಇಬ್ಬರು ಕುಬೇರರು ಇರಲೇ ಬಾರದು!" ಎಂದುಕೊಂಡು ಕತ್ತಿಯನ್ನು ಶೀಡಿ ಕಾದುಕೊಂಡಿದ್ದನು.

ಆಹಾರ ಪದಾರ್ಥ ತರಲು ಹೋದ ಕಳ್ಳ, "ಅವನೊಬ್ಬ ಸತ್ತು ಬಿಟ್ಟರೆ ಅಷ್ಟೂ ಧನಕ್ಕೆ ನಾನೊಬ್ಬನೇ ಅಧಿಕಾರಿ! ಇಂಥ ಸಂದರ್ಭ ಬಿಡಲೇ ಬಾರದು" ಎಂದುಕೊಂಡು, ತನ್ನ ಭಾಗದ ಆಹಾರ ಪದಾರ್ಥಗಳನ್ನು ಪ್ರತ್ಯೇಕಿಸಿ, ಉಳಿದುವಕ್ಕೆ ಕ್ರೂರ ವಿಷವನ್ನು ಬೆರೆಸಿಟ್ಟನು.

ಅವನು ಆಹಾರ ಪದಾರ್ಥಗಳೊಂದಿಗೆ ಬಂದ ಕೂಡಲೇ ಕಾವಲಿದ್ದ ಕಳ್ಳನು, ಒಂದೇಟಿಗೆ ಅವನ ಕುತ್ತಿಗೆ ಕಡಿದು, ಕಳೇಬರವನ್ನು ದೂರ ಒಗೆದನು. ಆಮೇಲೆ ಬಹು ಸಂತೋಷದಿಂದ ಕುಣಿದಾಡಿ ಹಾಯಾಗಿ ಕುಳಿತು ವಿಷ ಬೆರೆತ ಆಹಾರವನ್ನು ತಿಂದು ತಾನೂ ಸತ್ತು ಬಿದ್ದನು.

ಈ ಬಗೆಯ ಅನುಕ್ರಮದಲ್ಲಿ ಬ್ರಾಹ್ಮಣನೂ, ಕಳ್ಳರ ಮೇಲೆ ಕಳ್ಳರೂ ಎಲ್ಲಾ ಸತ್ತು ಸುಮ್ಮನಾಗಿ ಹೋದ ಮೇಲೆ, ಧನರಾಶಿಯೂ ಸುಮ್ಮನೆ ಬಿದ್ದಿತ್ತು.

ಎರಡು ದಿನಗಳ ಮೇಲೆ ಶಿಷ್ಯ ಬೋಧಿಸತ್ವನು ಕಳ್ಳರಿಗೆ ಕೊಡಬೇಕಾದ ರುಸುಮಿನ ಹಣವನ್ನು ಹಿಡಿದುಕೊಂಡು ಆ ಪ್ರಾಂತಕ್ಕೆ ಬಂದನು ತನ್ನ ಗುರು ಎಲ್ಲಿ ಹುಡುಕಿದರೂ ಕಾಣಲಿಲ್ಲ. ಎಲ್ಲಿ ಕಾಲಿಟ್ಟರೂ ಯಾರಾರದೋ ಹೆಣಗಳು! ಅವುಗಳನ್ನು ನೋಡುತ್ತಾ, ಬೋಧಿಸತ್ವನು "ಈ ಬ್ರಾಹ್ಮಣನು, ನನ್ನ ಮಾತನ್ನು ಲಕ್ಷಿಸಲಿಲ್ಲವೆಂದೇ ಕಾಣುತ್ತದೆ. ತನಗೆ ತೋರಿದ ಹಾಗೆಯೇ ಮಾಡಿಬಿಟ್ಟನು. ಮೊನ್ನೆಯ ಹುಣ್ಣಿಮೆಯನ್ನು ಬಿಡಲು ಮನಸ್ಸಿಲ್ಲದೆ, ಈ ನಿರ್ಭಾಗ್ಯ ಬ್ರಾಹ್ಮಣನು ಮಂತ್ರವನ್ನು ಜಪಿಸಿ ಧನವರ್ಷಣ ಬರಿಸಿದ್ದಾನೆ. ಅದರ ಫಲಿತವೇ ಈ ಶವಗಳು!" ಎಂದುಕೊಳ್ಳುತ್ತ, ಭಯವಿಶ್ರಿತನಾಗಿ



ತನ್ನ ಗುರುವನ್ನು ಹುಡುಕುತ್ತಾ ಹೋದನು. ಸ್ವಲ್ಪ ದೂರ ಹೋದ ಮೇಲೆ ಮರದಲ್ಲಿ ನೇತಾಡುವ ಗುರುವಿನ ಕಳೇಬರವನ್ನು ನೋಡಿದನು. "ಅಯ್ಯೋ! ಗುರುಗಳೇ! ನನ್ನ ಮಾತು ಕೇಳದೆ ಹೋದಿರಲ್ಲಾ! ಎಂತಹ ಗತಿ ಬಂತು ನಿಮಗೆ!" ಎಂದು ಶೋಕಿಸುತ್ತಾ, ಗುರುವಿನ ಕಳೇಬರವನ್ನು ಕೆಳಗಿಳಿಸಿ, ಚಿತಿ ಪೇರಿಸಿ ಗುರುವಿಗೆ ದಹನಾದಿ ಕ್ರಿಯೆಗಳನ್ನು ಮಾಡಿದನು. ಕಾಡಿನ ಹೂಗಳನ್ನು ಕೊಯಿದು ಕೊಂಡು ಬಂದು, ಅಸ್ಥಿಗಳ ಮುಂದಿಟ್ಟು ಗುರುವಿಗೆ ಕೊನೆಯ ನಮಸ್ಕಾರವನ್ನೂ ಮಾಡಿದನು. ತುಂಬಾ ಬಾಷ್ಪಾಂಜಲಿ ಅರ್ಪಿಸಿದನು.

ಅಲ್ಲಿಂದ ಬೋಧಿಸತ್ವನು ಇನ್ನೂ ಹಾಗೆ ನೋಡುತ್ತಾ ಹೋಗುತ್ತಿರಲು, ಮೊದಲನೇ ಕಳ್ಳರ ಗುಂಪಿನ ಶವಗಳು ಇನ್ನೂ ಕಣ್ಣಿಗೆ ಬಿದ್ದುವು. ಮತ್ತಷ್ಟು ಮುಂದೆ ಹೋಗಲು ಎರಡನೇ ಕಳ್ಳರ ಗುಂಪಿನವರ ಹೆಣಗಳು ಕಂಡು ಬಂದುವು. ಧನವನ್ನು

ಯಾರು ಒಯ್ದಿರಬಹುದೆಂದು ಯೋಚಿಸುತ್ತಾ, ಮುಂದೆ ಮುಂದೆ ಹೋದನು. ಒಂದೊಂದೇ ಶವ. ವನ್ನು ಎಣಿಸುತ್ತಾ ಸಾಗಿದನು. ನಾಲ್ಕು ಪಾದಗಳ ಗುರುತು ದಟ್ಟವಾದ ಕಾಡಿನೊಳಗೆ ಹೋಗುವುದನ್ನು ನೋಡಿ ಬೋಧಿಸತ್ವನು ಅದನ್ನು ಅನುಸರಿಸಿಕೊಂಡೇ ಹೋದನು.

ಅಲ್ಲೊಂದೆಡೆ ಪೊದರುಗಳ ಮರೆಯಲ್ಲಿ ಅನೇಕ ಧನದ ಮೂಟೆಗಳಿರುವುದನ್ನು ನೋಡಿದನು. ಒಬ್ಬನ ಶವವೂ ಅಲ್ಲಿದ್ದಿತು.

ಪಕ್ಕದಲ್ಲಿ ಆಹಾರ ಪದಾರ್ಥಗಳೂ ಇದ್ದುವು. "ಓಹೋ ! ಕಡೆಗೆ ಹೀಗಾಯಿತು !" ಎಂದು ಉದ್ಗರಿಸಿಕೊಂಡನು. ಇನ್ನೊಬ್ಬನ ರುಂಡ ಮುಂಡ ಗಳೂ ಮತ್ತೊಂದು ಕಡೆಯಲ್ಲಿದ್ದುವು. ಇಷ್ಟು ನೋಡಿದ ಮೇಲೆ ನಡೆದುದು ಏನೆಂಬುದು ಮೊದಲಿನಿಂದ ಕೊನೆಯವರೆಗೂ ಬೋಧಿಸತ್ವನಿಗೆ ಗೊತ್ತಾಯಿತು. ಯೋಚಿಸುತ್ತಾ ಬಹಳ ಹೊತ್ತು ಹಾಗೆಯೇ ನಿಂತುಬಿಟ್ಟನು.

ಇದನ್ನು ಆಲೋಚನೆ ಮಾಡಿದಂತೆ ಬೋಧಿಸತ್ವನಿಗೆ ದೊಡ್ಡ ವಿಚಾರ ಹಿಡಿಯಿತು. "ಎಷ್ಟು ದೊಡ್ಡ ವಿದ್ವಾಂಸರಾದರೂ ವಿವೇಕವಿಲ್ಲದಿದ್ದರೆ ವ್ಯರ್ಥವೇ ಸರಿ. ಹೇಳಿದರೂ ಗುರುಗಳು ಕೇಳದೆ ಹೋದರು ! ಹಣ ಬಂದರೆ ತನಗೆ ಸುಖವೆಂದೇ ತಿಳಿದರು. ಅದರ ಫಲಿತ ತಾನೂ ನಾಶವಾದುದು ಮಾತ್ರವಲ್ಲದೆ, ತನ್ನೊಂದಿಗೆ ಅನೇಕರ ಪ್ರಾಣಗಳಿಗೂ ನಾಶ ತಂದರು. ಇನ್ನೊಬ್ಬರ ಮಾತನ್ನು ಕೇಳದೆ ತನಗೆ ತೋರಿದ್ದೇ ಸರಿಯೆಂಬವರಿಗೆ ಇಂತಹ ಗತಿಯೇ ಬರುತ್ತದೆ.

"ನನ್ನ ಗುರುಗಳು ತಮ್ಮ ಮಂತ್ರ ಮಹಿಮೆಯಿಂದ ಭೂಲೋಕಕ್ಕೆ ತರಿಸಿದ ಧನಸಂಪತ್ತು ಮಾನವ ಲೋಕಕ್ಕೆ ಉಪಕಾರವಂತೂ ಮಾಡದೆ, ಮಾನವ ಸಮೂಹದ ಸಾವಿಗೇ ಕಾರಣವಾಯಿತು. ಆದುದರಿಂದ ಬುದ್ಧಿ ವಕ್ರಮಾರ್ಗ ಹಿಡಿದರೆ ಎಲ್ಲಾ ವಸ್ತುಗಳಿಗೂ ಕೆಡುಕೇ ಆಗುತ್ತದೆ. ದೋಷವು ವಸ್ತುಗಳಲ್ಲಿ ಇಲ್ಲ, ಬುದ್ಧಿಯಲ್ಲಿದೆ. ವಕ್ರಬುದ್ಧಿ ಅಗ್ನಿಜ್ವಾಲೆಯಂತಹುದು. ಅನೇಕರ ನಾಶನವಾಗದೆ ಅದು ಆರಿ ಹೋಗುವುದಿಲ್ಲ." ಹೀಗೆ ಬೋಧಿಸತ್ವನು ಅರಣ್ಯವೆಲ್ಲಾ ಮಾರ್ಮೊಳಗುವ ಹಾಗೆ ಬೋಧನಾಧ್ವನಿ ಹೊರಡಿಸಿದನು. ತನ್ನ ಗುರುಗಳನ್ನು ಉದಾಹರಣೆ ತೋರಿಸಿ ಎಲ್ಲರಿಗೂ ತಾಗುವ ಹಾಗೆ ಕೂಗಿ ಹೇಳಿದನು. ಬೋಧಿಸತ್ವನ ಬೋಧನೆಗಳನ್ನು ಕೇಳಿ ವನದೇವತೆಗಳು ಜಯಜಯವೆಂದರು.

ಆಮೇಲೆ ಬೋಧಿಸತ್ವನು ಆ ಧನಸಂಪತ್ತನ್ನೆಲ್ಲಾ ತನ್ನ ಆಶ್ರಮಕ್ಕೆ ಸಾಗಿಸಿ, ಅದನ್ನೆಲ್ಲಾ ಲೋಕೋಪಕಾರಕ್ಕೆ ವಿನಿಯೋಗಿಸಿ, ತರುವಾಯ ಅವತಾರವನ್ನು ಸಮಾಪ್ತಿ ಮಾಡಿಕೊಂಡನು.





## ತಾಂತಿಯಾ ತೋಪೀ, ಕುನ್ವರ್ ಸಿಂಗ್

ಸಿಪಾಯಿಗಳ ದಂಗೆಯಲ್ಲಿ ತಾಂತಿಯಾ ತೋಪೀ ಅಪೂರ್ವ ಧೈರ್ಯ ಸಾಹಸ ಯುದ್ಧ ನೈಪುಣ್ಯತೆಗಳನ್ನು ಪ್ರಕಟಪಡಿಸಿದನು. ಸಂಪ್ರದಾಯದ ಕುಟುಂಬದಲ್ಲಿ ಹುಟ್ಟಿ, ನಾನಾಸಾಹೇಬನ ಆಸ್ಥಾನದಲ್ಲಿ ಗುಮಾಸ್ತನಾಗಿದ್ದರೂ, ತಾಂತಿಯಾತೋಪೀ ತನ್ನ ಯಜಮಾನನ ಹಕ್ಕುಗಳನ್ನು ರಕ್ಷಿಸಲು ಆಯುಧ ಧರಿಸಿದನು. ಸಾಮಾನ್ಯನನ್ನು ಸಹಾ ಒಳ್ಳೆಯ ಸೈನಿಕನನ್ನಾಗಿ ಮಾರ್ಪಡಿಸುವಂತಹ ಅದ್ಭುತ ಶಕ್ತಿ ಅವನಲ್ಲಿತ್ತು.

ಒಂದು ಸಾರಿ ತಾಂತಿಯಾ ತೋಪೀ ಬ್ರಿಟಿಷ್ ಸೇನೆಗಳನ್ನು ಪೂರ್ತಿ ಸೋಲಿಸಿ ಕಾನ್ಪೂರದಿಂದ ಕೆಲವು ಮೈಲು ದೂರದ ವರೆಗೆ ಓಡಿಸಿಕೊಂಡು ಹೋದನು. ಆಗ ಸೂರ್ಯಾಸ್ತಮಾನವಾದುದರಿಂದ ಅಲ್ಲಿಗೆ ಬಿಟ್ಟನು. ಬ್ರಿಟಿಷ್ ಸೇನಾನಾಯಕನು ತನ್ನ ದಯನೀಯವಾಗಿ ಹೋದ ಸ್ಥಿತಿಯನ್ನು ಕುರಿತು, ಭಾರತ ದೇಶದ ಬ್ರಿಟಿಷ್ ಸರ್ವ ಸೇನಾ ನಾನಾಯಕ ಸರ್ ಕೋಲಿನ್ ಕಾಂಬೆಲ್ಲಿಗೆ ಸುದ್ದಿ ಕಳುಹಿಸಿದನು.





ಆ ಸುದ್ದಿ ಕೇಳಿದ ಕೂಡಲೇ ಸರ್ ಕೋಲಿನ್ ಕಾಂಬೆಲ್ ದೊಡ್ಡ ಸೈನ್ಯದೊಂದಿಗೆ ಕಾನ್ಪೂರಕ್ಕೆ ಬಂದನು. ಆಗ ತಾಂತಿಯಾತೋಪೀ ಕಾಲ್ಪಿಯಾ ಪಟ್ಟಣದಲ್ಲಿದ್ದನು. ಅವನು ಅನೇಕ ಬಾರಿ ಕೋಲಿನ್ ಕಾಂಬೆಲ್ಲಿನ ಸೈನ್ಯವನ್ನು ಇದಿರಿಸಿ ಯುದ್ಧ ಮಾಡಿದನು. ಅವನ ಧೈರ್ಯವೂ, ಯುದ್ಧ ನೈಪುಣ್ಯತೆಯೂ ಬ್ರಿಟಿಷರನ್ನು ಬಹಳವಾಗಿ ದಂಗುಬಡಿಸಿತು.



ಒಂದು ಸಾರಿ ತಾಂತಿಯಾ ತೋಪೀಗೆ ಸ್ವಲ್ಪ ಕಾಯಿಲೆ ಬಂತು. ಆಗ ಅವನು ಒಬ್ಬ ಚಿಕ್ಕ ರಾಜನ ಆಶ್ರಯವನ್ನು ಕೇಳಿದನು. ಆ ರಾಜನು ಅವನನ್ನು ಅತ್ಯಂತ ಗೌರವದಿಂದ ಆದರಿಸಿದನು ತಾನು ಭಾರತೀಯ ಪಾಲಕರ ಗೌರವ ಸ್ವಾತಂತ್ರ್ಯಗಳನ್ನು ರಕ್ಷಿಸಲಿಕ್ಕೇ ಹೋರಾಡುವವನಾದುದ್ರಿಂದ, ಅಂತಹ ಭಾರತೀಯ ರಾಜನು ತನಗೆ ದ್ರೋಹ ಬಗೆಯಲಾರನೆಂದು ತಾಂತಿಯಾ ತೋಪೀ ನಂಬಿದನು.

ಆದರೆ ಅವನ ನಂಬುಗೆ ಸುಳ್ಳಾಯಿತು. ಅವನಿಗೆ ಆಶ್ರಯವಿತ್ತ ರಾಜನು ದುಷ್ಟನು. ತಾಂತಿಯಾ ತೋಪೀ ತನ್ನ ಬಳಿಯಲ್ಲಿರುವ ಸಂಗತಿಯನ್ನು ಅವನು ರಹಸ್ಯವಾಗಿ ಬ್ರಿಟಿಷರಿಗೆ ಮುಟ್ಟಿಸಿದನು. ತಾಂತಿಯಾತೋಪೀ ಉದ್ಯಾನವನದಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾಗ, ಬ್ರಿಟಿಷ್ ಸೈನಿಕರು ತೋಟ ಮಾಲಿಗಳ ವೇಷದಲ್ಲಿ ಬಂದು, ಅವನನ್ನು ಮುತ್ತಿ ಹಿಡಿದರು.





"ನನ್ನ ಮೇಲೆ ವಿಚಾರಣೆ ನಡೆಸುವ ಹಕ್ಕು ನಿಮಗಿಲ್ಲ. ನಾನು ಬ್ರಿಟಿಷ್ ಅಧಿಕಾರಕ್ಕೆ ಒಳಪಟ್ಟವನಲ್ಲ. ಮನೆಯೊಳಗೆ ನುಗ್ಗಿ ಕೊಳ್ಳೆ ಹೊಡೆಯುವ ಕಳ್ಳರು, ಮನೆಯ ಯಜಮಾನನನ್ನು ಹಿಡಿದು, ನ್ಯಾಯಶಾಸನಗಳೆಂದು ಅವನ ಮೇಲೆಯೇ ವಿಚಾರಣೆ ನಡೆಸುವುದು ನ್ಯಾಯ ವ್ಯವಸ್ಥೆಯನ್ನೇ ಗೇಲಿಮಾಡುವಂತೆ" ಎಂದು ಬ್ರಿಟಿಷರಿಗೆ ಇದಿರು ತಿರುಗಿ ಗರ್ಜಿಸಿದನು ತಾಂತಿಯಾ ತೋಪೀ.

ತಾಂತಿಯಾ ತೋಪೀಯನ್ನು ಗಲ್ಲಿಗೇರಿಸಿದುದನ್ನು ನೋಡಿ ನಾನಾಸಾಹೇಬನಿಗೆ ತುಂಬಾ ವಿಷಾದವಾಯಿತು. ಆ ಸ್ಥಿತಿಯಲ್ಲಿ ಕೂಡಾ ಅವನು ಬ್ರಿಟಿಷರನ್ನು ಇದಿರಿಸಿ ಹೋರಾಡಿದನು. ಕಟ್ಟಕಡೆಗೆ ನಾನಾಸಾಹೇಬನು ನೇಪಾಳದ ಕಾಡಿನೊಳಗೆ ಓಡಿ ಹೋದನು. ಅವನನ್ನು ಹಿಡಿಯಲು ಬ್ರಿಟಿಷರು ಬಹಳ ಪ್ರಯತ್ನ ಪಟ್ಟರು. ಆದರೆ ಅವನು ಸಿಗಲೇ ಇಲ್ಲ.





ಸಿಪಾಯಿ ದಂಗೆಯಲ್ಲಿ ಭಾಗವಹಿಸಿದ ಮತ್ತೊಬ್ಬ ಸಾಹಸದ ವೀರಪುಂಗವನೆಂದರೆ, ಜಗದೀಶ್‌ಪುರ ಪಾಲಕನಾದ ರಾಜಾ ಕುನ್ವರ್‌ಸಿಂಗ್. ಎಪ್ಪತ್ತೈದು ವಯಸ್ಸಿನವನಾದ ಕುನ್ವರ್ ಸಿಂಗ್ ಸ್ವತಃ ಆಯುಧಗಳನ್ನು ಹಿಡಿದು ಹೋರಾಡಿದನು. ತನ್ನ ಸೈನಿಕರಿಗೆ ಗೆರಿಲ್ಲಾ ಯುದ್ಧ ವಿಧಾನದಲ್ಲಿ ಶಿಕ್ಷಣ ಕೊಟ್ಟನು. ಮರಗಳ ಮೇಲಿನಿಂದ, ಪೊದೆಗಳ ಮರೆಯಿಂದ ಅವರು ಬ್ರಿಟಿಷ್ ಸೇನೆಗಳೊಂದಿಗೆ ಹೋರಾಡಿದರು.

ಮಿಂಚಿನಂತಹ ಬಿಳೀ ಕುದುರೆಯ ಮೇಲೆ ಅಧಿರೋಹಿಸಿ ಯುವಕ ವೀರನಂತೆ ಹೋರಾಡಿದನು ಕುನ್ವರ್‌ಸಿಂಗ್. ಒಮ್ಮೆ ಯುದ್ಧದಲ್ಲಿ ಬ್ರಿಟಿಷ್ ಸೇನೆಗಳು ಸಿಡಿಸಿದ ತುಪಾಕೀಗುಂಡು ಕುನ್ವರ್ ಸಿಂಗನ ಬಲಗೈಗೆ ತಾಗಿತು. ಆದರೂ ಅವನು ಗಾಯಗೊಂಡ ಆ ಕೈಯಲ್ಲಿ ಕಡಿವಾಣ ಹಿಡಿದುಕೊಂಡು, ಎಡಗೈಯಲ್ಲಿ ಶಕ್ತಿ ತಿರುಗಿಸುತ್ತ ಶತ್ರುಗಳನ್ನು ಹತಮಾಡಿದನು.





ಕೆಲವು ದಿನಗಳ ಮೇಲೆ ಗಾಯವಾದ ಕೈಯ ವಿಷವು ಶರೀರವೆಲ್ಲಾ ವ್ಯಾಪಿಸುವಂತೆ ಕುನ್ವರ್ ಸಿಂಗಿಗೆ ಗೊತ್ತಾಯಿತು. ಅವನು ಗಂಗಾನದಿಯ ಬದಿಗೆ ಹೋಗಿ, "ಹೇ ಗಂಗಾಮಾತಾ ! ಇಕೋ ನಿನಗೆ ನನ್ನ ಕಾಣಿಕೆ !" ಎಂದು ಎಡಗೈಯ ಕತ್ತಿಯಿಂದ ಬಲಗೈಯನ್ನು ಕಡಿದು ಗಂಗಾನದಿಗೆ ಬೀಳಿಸಿದನು !

ಸ್ವಲ್ಪ ಹೊತ್ತಿನ ಮೇಲೆ ಮೂರ್ಛೆ ಹೋಗಿ ಬಿದ್ದ ಕುನ್ವರ್‌ಸಿಂಗ್ ಮರುದಿನ ಸತ್ತೂ ಹೋದನು. ಅವನ ಅನಂತರ ತಮ್ಮನಾದ ಅಮರಸಿಂಗ್ ಸೇನೆಗಳಿಗೆ ನಾಯಕನಾಗಿ ಕೋಟೆ ಬಿದ್ದು ಹೋಗುವವರೆಗೂ ಹೋರಾಡಿದನು.





ಜಗದೀಶಪುರದ ರಾಜಭವನದೊಳಗಿನ ಸ್ತ್ರೀಯರು ಫಿರಂಗಿಗಳ ಮುಂದೆ ನಿಂತು, ಅವುಗಳಿಗೆ ಬೆಂಕಿಹಚ್ಚಿಸಿ ತಮ್ಮ ಪ್ರಾಣಗಳನ್ನು ಆಹುತಿಕೊಟ್ಟರು. ಅಮರಸಿಂಗ್ ಅಲ್ಲಿಂದ ತಪ್ಪಿಸಿಕೊಂಡು ಹೋದನು. ಸಿಪಾಯಿದಂಗೆ ಅಂತ್ಯವಾಗತೊಡಗಿತು.



# ದುಷ್ಟನ ಘಾತಣ

ಷಿರಾಜ್ ನಗರದ ಹತ್ತಿರವಿದ್ದ ಒಂದು ಸಣ್ಣ ಊರಿನಲ್ಲಿ ಅಲೀಖುದ್ದೂಸ್ ಎಂಬೊಬ್ಬನಿದ್ದನು. ಅವನ ತಂದೆಯೂ ತಾತಂದಿರೂ ಬಹುದೊಡ್ಡ ಧನವಂತರಾಗಿದ್ದರು. ಆದರೆ ಅಲೀ ಬೆಳೆದು ದೊಡ್ಡವನಾಗುತ್ತಿದ್ದ ಕಾಲದಲ್ಲಿ ಅವನ ತಂದೆಗೆ ವ್ಯಾಪಾರದಲ್ಲಿ ಭಾರಿ ನಷ್ಟವಾಯಿತು. ಅದರಿಂದ ಇದ್ದ ಆಸ್ತಿಯನ್ನೆಲ್ಲಾ ಕಳೆದುಕೊಂಡನು. ಮತ್ತೆ ಮೇಲೇಳಲಾಗದೆ ಕಾಯಿಲೆ ಬಿದ್ದು ತೀರಿಯೂ ಹೋದನು. ಹೀಗಾಗಿ ಅಲೀಗೆ ಉಳಿದುದೇದರೆ ಶಿಥಿಲಾವಸ್ಥೆಯಲ್ಲಿದ್ದ ದೊಡ್ಡ ಮನೆ ಮತ್ತು ಅದರ ಪಕ್ಕದಲ್ಲಿದ್ದ ಇನ್ನೊಂದು ಸಣ್ಣ ಮನೆ ಮಾತ್ರವೇ.

ಅಲೀ ತಾನೊಬ್ಬನೇ ತನ್ನ ತಂದೆ ತನಗೆ ಬಿಟ್ಟು ಹೋದ ಮನೆಯಲ್ಲಿ ವಾಸಮಾಡಿಕೊಂಡಿದ್ದನು. ಪಕ್ಕದಲ್ಲಿರುವ ಸಣ್ಣ ಮನೆಯನ್ನು ಬಾಡಿಗೆಗೆ ಬಿಟ್ಟಿದ್ದನು. ತಿಂಗಳು ತಿಂಗಳೂ ತಪ್ಪದೆ ಅವರು ಐದು ಬೆಳ್ಳಿ ನಾಣ್ಯ ಬಾಡಿಗೆ ಕೊಡುತ್ತಿದ್ದರು. ಆ ಬಾಡಿಗೆಯ ಹಣವನ್ನು ಅಲೀ ಖರ್ಚಿಗೆ ಉಪಯೋಗಿಸುತ್ತಿದ್ದಿಲ್ಲ. ಆ ಮೊತ್ತವನ್ನು ಒಂದು ಕಲ್ಲಿನ ಜಾಡಿಯೊಳಗಿಟ್ಟು, ಅದನ್ನು ಮನೆಯ ಆವರಣದೊಳಗೆ ಒಂದು ಮೂಲೆಯಲ್ಲಿದ್ದ ಪಾಳುಬಾವಿಯ ಹತ್ತಿರ ಹುಗಿದಿಡುತ್ತಿದ್ದನು. ಅದಕ್ಕೆ ಕಾರಣವೇನೆಂದರೆ ಅಲೀ ವಾಸಮಾಡುವ ಪಿತ್ರಾರ್ಜಿತವಾದ ಆ ದೊಡ್ಡ ಮನೆಗೆ ದ್ವಾರಬಂಧಗಳೋ ಬಾಗಿಲುಗಳೋ ಇರಲಿಲ್ಲ. ಅವುಗಳನ್ನೆಲ್ಲ ಸಾಲದವರು ಎಂದೋ ಎಬ್ಬಿಸಿಕೊಂಡು ಹೊರಟು ಹೋಗಿದ್ದರು. ಆದುದರಿಂದ ಹಣವನ್ನು ಭದ್ರಪಡಿಸಲು ಯೋಗ್ಯವಾದ ಸ್ಥಳವಾವುದೂ ಇರಲಿಲ್ಲ.

ಅಲೀ ವಾಸ ಮಾಡುವ ಭವನಕ್ಕೆ ಸ್ವಲ್ಪ ದೂರದಲ್ಲಿ ಸಣ್ಣದೊಂದು ಗುಡಿಸಲು ಮನೆ ಇದ್ದಿತು. ಅಲ್ಲಿ ಒಬ್ಬ ಸೋಮಾರಿ ಮನುಷ್ಯನಿದ್ದನು. ಅವನು ಸೋಹೂರಿಯಷ್ಟೇ ಅಲ್ಲದೆ ದುಷ್ಟಬುದ್ಧಿ ತುಂಬಿರುವವನು. ಅವನು ಅಲೀಯೊಂದಿಗೆ ಬಹಳ ಸ್ನೇಹವನ್ನು ನಟಿಸುತ್ತ, ಅವನು ಹಣವನ್ನು ಎಲ್ಲಿ ಅಡಗಿಸಿಡುವನೆಂಬುದನ್ನು ತಿಳಿಯಲು ಪ್ರಯತ್ನ ಮಾಡಿಕೊಂಡೇ ಇದ್ದನು. ಬಹಳ ದಿನಗಳವರೆಗೆ ಅಲೀಯ ಗುಟ್ಟು ಅವನಿಗೆ ಗೊತ್ತಾಗಲಿಲ್ಲ. ಕಡೆಗೆ ಒಂದು ದಿನ ಆ ಸೋಮಾರಿ ಮನುಷ್ಯ ಒಂದು ರಹಸ್ಯ ಪ್ರದೇಶದಲ್ಲಿ ಅಡಗಿದ್ದು, ರಾತ್ರಿಯ ಹೊತ್ತಿನಲ್ಲಿ ಅಲೀ ಒಂದು ಕಲ್ಲಿನ ಜಾಡಿಯಲ್ಲಿ ಹಣವನ್ನು

ಅರೇಬಿಯಾ ಕಥೆ



ಎಣಿಸಿ ಹಾಕಿ ಅಲ್ಲಿರುವ ಹೊಂಡದೊಳಗೆ ಹುಗಿದಿಡುವುದನ್ನು ನೋಡಿಬಿಟ್ಟನು.

ಅಷ್ಟು ತಿಳಿದ ಮೇಲೆ ಒಂದು ದಿನ ರಾತ್ರಿ ಅಲೀ ನಿಶ್ಚಿಂತೆಯಿಂದ ನಿದ್ದೆ ಮಾಡಿಕೊಂಡಿರುವಾಗ, ಆ ದುಷ್ಟನು ಅಲೀ ಶಿಥಿಲ ಭವನದೊಳಗೆ ಪ್ರವೇಶಿಸಿ, ಹುಗಿದಿಟ್ಟ ಕಲ್ಲು ಜಾಡಿಯನ್ನು ಎತ್ತಿಕೊಂಡು ಹೋಗಿ, ತನ್ನ ಗುಡಿಸಿಲಿಗೆ ಒಯ್ದು ಒಳಗಿರುವುದನ್ನು ಎಣಿಸಿ ನೋಡಿದನು. ಜಾಡಿಯಲ್ಲಿ ಅರುವತ್ತು ಬೆಳ್ಳಿ ನಾಣ್ಯಗಳಿದ್ದುವು. ಆ ದುಷ್ಟ ಸೋಮಾರಿಗೆ ಬಹಳ ಸಂತೋಷವಾಯಿತು.

ಮರುದಿನ ಅಲೀ ಮನೆಯವರು ಕೊಟ್ಟ ಬಾಡಿಗೆ ಹಣ ಐದು ಬೆಳ್ಳಿಯ ನಾಣ್ಯಗಳನ್ನು ತೆಗೆದುಕೊಂಡು ಕಲ್ಲು ಜಾಡಿಯೊಳಗೆ ಹಾಕಲು ಭವನದ ಮೂಲೆಗೆ ಹೋಗಿ ನೋಡಿದನು. ಅಲ್ಲಿ ಜಾಡಿ ಇಲ್ಲದಿರುವುದು ಗೊತ್ತಾದುದರ ಬೆನ್ನಿಗೇ, ಅದು ದುಷ್ಟ ಸೋಮಾರಿಯ ಕೆಲಸವೇ ಎಂದೂ ಅನುಮಾನಿಸಿಕೊಂಡನು. ತಾನು ಮನೆಯೊಳಗೆ ತಿರುಗುತ್ತಿರುವಾಗ ಆ ದುಷ್ಟನು ಆಗಾಗ ಮೊಂಡು ಗೋಡೆಯ ಮೇಲೆ ಮುಖ ಎಕ್ಕಳಿಸಿ ನೋಡುವುದು ಕಂಡಿತ್ತು. ಆದುದರಿಂದ ತನ್ನ ರಹಸ್ಯವು ಅವನ ಹೊರತು ಬೇರೆ ಯಾರಿಗೂ ತಿಳಿಯಲು ಸಾಧ್ಯವಿಲ್ಲವೆಂದು ತೋರಿತು. ಹೇಗಾದರೂ ಅವನಿಗೆ ತಕ್ಕ ಶಾಸ್ತಿ ಮಾಡಲೇಬೇಕು ಎಂದುಕೊಂಡನು.

ಒಮ್ಮೆಗೇ ತಾನು ಅರುವತ್ತು ನಾಣ್ಯಗಳನ್ನು ಸಂಪಾದಿಸಿಬಿಟ್ಟೆನೆಂದು ಸೋಮಾರಿಗೆ ಬಹಳ ಸಂತೋಷವಾಗಿದ್ದರೂ, ತಾನು ಸುಮ್ಮನಿರಬಾರದೆಂದುಕೊಂಡನು. ಅಲೀಗೆ ತನ್ನ ಮೇಲೆ ಸಂಶಯ ಬಾರದಂತಿರಲು, ಎಂದಿನ ಹಾಗೆಯೇ ಅವನ ಹತ್ತಿರ ಏನಾದರೂ ಹರಟೆ ಹೊಡೆಯಲು ಮೆಲ್ಲನೆ ಹೊರಟು ಬಂದನು ಆ ಸೋಮಾರಿ.

ಅವನು ದೂರದಲ್ಲಿ ಬರುವಾಗಲೇ ಕಿಟಿಕಿಯ ಮೂಲಕ ಅಲೀ ನೋಡಿದನು. ಕೂಡಲೇ ಅವನು ತನ್ನ ಹತ್ತಿರವಿದ್ದ ಐದು ಬೆಳ್ಳಿ ನಾಣ್ಯಗಳನ್ನು ದ್ವಾರದ ಮುಂದೆ ಹರಡಿಸಿಟ್ಟು, ಹೊರಬದಿಗೆ ಬೆನ್ನು ಕಾಣುವ ಹಾಗೆ ಕುಳಿತುಕೊಂಡು, "ಹೂಂ. ಕಲ್ಲು ಜಾಡಿಯಲ್ಲಿ ಈವರೆಗಿನ ಬಾಡಿಗೆ ಹಣ ಅರುವತ್ತು ನಾಣ್ಯಗಳಾಗಿವೆ. ಇವತ್ತು ರಾತ್ರಿ ಈ ಐದು ನಾಣ್ಯಗಳನ್ನೂ ಅದರೊಂದಿಗೆ ಸೇರಿಸಿಬಿಡುತ್ತೇನೆ. ಅಂದರೆ ಜಾಡಿಯೊಳಗೆ ಅರುವತ್ತೈದು ನಾಣ್ಯಗಳಾಗುತ್ತವೆ. ಆಹಾ! ಬಹು ದೊಡ್ಡ ಮೊತ್ತವೇ ಸೇರಿದೆಯೆಂದಾಯಿತು. ಇನ್ನು ನೂರಕ್ಕೆ ಮೂವತ್ತೈದು ನಾಣ್ಯಗಳಷ್ಟೇ ಸಾಕು!" ಎಂದು ತನಗೆ ತಾನೇ ಮಾತಾಡಿಕೊಳ್ಳುವ ಹಾಗೆ ಹೇಳಿಕೊಂಡನು.

ಸೋಮಾರಿ ಅವನ ಹಿಂದಿನಿಂದ ಹತ್ತಿರದವರೆಗೂ ಬಂದು ಅವನು ಹೇಳಿದ ಮಾತುಗಳನ್ನು ಕೇಳಿಸಿಕೊಂಡನು. ಅಲೀ ಅವನನ್ನು ನೋಡಿದ ಕೂಡಲೇ ಬೆಳ್ಳಿ ನಾಣ್ಯಗಳನ್ನು ಹೆಕ್ಕಿ ಬಟ್ಟೆಯೊಳಗೆ ಕಟ್ಟಿ

ಕೊಂಡು, ಮುಗುಳ್ನಗುತ್ತ ಸ್ವಾಗತಿಸಿ, ಮರ್ಯಾದೆಯಿಂದ ಸೋಮಾರಿಯನ್ನು ಮಾತಾಡಿಸಿದನು.

ಸೋಮಾರಿ ಮನುಷ್ಯನಿಗೆ ಆ ಐದು ನಾಣ್ಯಗಳನ್ನು ಕೂಡಾ ವಶಪಡಿಸಿಕೊಳ್ಳಲೇಬೇಕೆಂದು ತೋರಿತು. ಜಾಡಿ ಕಳವಾದುದು ಇನ್ನೂ ಅಲೀಗೆ ತಿಳಿಯದು. ಈ ಐದು ನಾಣ್ಯಗಳನ್ನು ಅದರೊಳಗೆ ಹಾಕುವಾಗ, ಜಾಡಿಯೊಳಗೂ ಕೈ ತೂರಿಸಿ ನೋಡುತ್ತಾನೆ. ಎಣಿಸಿದರೂ ಎಣಿಸಿದನೇ. ಆದುದರಿಂದ ತಾನು ಜಾಡಿಯನ್ನು ಇದ್ದಕ್ಕಿದ್ದ ಹಾಗೆಯೇ ಒಯ್ದು ಆ ಹೊಂಡದಲ್ಲಿ ಇಟ್ಟುಬಿಟ್ಟರೆ, ಈ ಐದು ನಾಣ್ಯಗಳೂ ಅದರೊಳಗೆ ಬಿದ್ದುಬಿಡುತ್ತವೆ. ಮರುದಿನ ರಾತ್ರಿ ಅರುವತ್ತೈದು ನಾಣ್ಯಗಳೂ ತನ್ನದಾಗುತ್ತವೆ !

ಆದರೆ ಹಚ್ಚ ಹಗಲಿನಲ್ಲಿ ಜಾಡಿಯನ್ನು ಒಯ್ದು ಯಥಾಸ್ಥಾನದಲ್ಲಿಡುವುದು ಹೇಗೆ ? ಶಿಥಿಲವಾದ ಆ ಭವನದೊಳಗೆ ಹಗಲು ಹೊತ್ತಿನಲ್ಲಿ ಕೂಡಾ ಯಾರೂ ಪ್ರವೇಶಿಸುವುದಿಲ್ಲ ನಿಜವೇ. ಆದರೆ ಅಲೀ ಅಲ್ಲಿ ಇರಬಾರದಷ್ಟೆ ? ಅವನು ದೂರ ಹೋಗುವಂತೆ ಮಾಡುವುದು ಹೇಗೆಂದು ಸೋಮಾರಿ ಸ್ವಲ್ಪಹೊತ್ತು ಆಲೋಚಿಸಿ, ಒಂದು ಉಪಾಯವನ್ನು ಕಂಡುಹಿಡಿದನು. ಹಣದ ಆಶೆ ಹತ್ತಿಕೊಂಡುದರಿಂದ ಆ ಸೋಮಾರಿಯ ಜಡ ಬುದ್ಧಿಯೂ ಚುರುಕಾಗಿ ತಿರುಗಿತು.

ಸೋಮಾರಿ ಅಲೀಯೊಂದಿಗೆ. " ಮಿತ್ರಾ, ನಾನೂ ನೀನೂ ಬಹಳ ಕಾಲದಿಂದ ಮಿತ್ರರಾಗಿದ್ದೇವೆ. ನನಗೊಂದು ಆಶೆ ಹಾಗೆಯೇ ಉಳಿದಿದೆ. ಹೇಳಲೆ ? " ಎಂದನು.

" ಏನದು ? " ಎಂದು ಕೇಳಿದನು ಅಲೀ.

" ಇಲ್ಲಿ ಸಮೀಪವಿರುವ ಯಾವುದಾದರೂ ಭೋಜನಶಾಲೆಗೆ ಹೋಗಿ ನಿನಗೆ ಔತಣ ಕೊಡಬೇಕೆಂದು ನನ್ನ ಬಹು ದಿನಗಳ ಆಶೆ. ಈ ದಿನ ರಾತ್ರಿ ನಿನಗೆ ಬಿಡುವಿದೆಯೇ ? " ಎಂದು ಕೇಳಿದನು ಸೋಮಾರಿ.

" ಇದೇನು ಪ್ರಶ್ನೆ ! ನಿನ್ನಂಥ ಪ್ರಾಣಮಿತ್ರನು ಔತಣಕ್ಕೆ ಕರೆಯುತ್ತಿದ್ದರೆ ನನಗೆ ಬಿಡುವಿಲ್ಲದೆ



ಹೋಗುವುದೆಂದರೇನು ? ಬಹಳ ಸಂತೋಷದ ಸಮಾಚಾರ !" ಎಂದು ಅಲೀ ಬಹಳ ಉತ್ಸಾಹವನ್ನು ತೋರಿಸಿದನು.

ಆ ದಿನ ರಾತ್ರಿ ಅವರಿಬ್ಬರೂ ಭೋಜನಶಾಲೆಯ ಹತ್ತಿರ ಕೂಡಿಕೊಂಡರು. ಸೋಮಾರಿಯವನು ಬಗೆಬಗೆಯ ಮಾಂಸಗಳನ್ನೂ, ಪದಾರ್ಥಗಳ ಹೆಸರುಗಳನ್ನೂ ವಿವರಿಸಿ ಭೋಜನಶಾಲೆಯ ಯಜಮಾನನೊಂದಿಗೆ ಅವುಗಳನ್ನೆಲ್ಲ ಸಿದ್ಧಪಡಿಸಲು ಹೇಳಿದನು.

ಭೋಜನಶಾಲೆಯಲ್ಲಿ ಅವೆಲ್ಲ ತಯಾರಾಗುತ್ತಿದ್ದಾಗ ಸೋಮಾರಿ ಅಲೀಯೊಂದಿಗೆ ಪಿಸುದನಿಯಿಂದ, "ಅಲೀ, ಏನೂ ಅಂದುಕೊಳ್ಳಬಾರದು. ಹಣ ತರಲು ಮರೆತೆನು. ಮನೆಗೆ ಹೋಗಿ ಬೇಗ ಬರುತ್ತೇನೆ" ಎಂದು ಹೇಳಿ ಹೊರಟುಹೋದನು. ಅವನು ಹೋಗುವುದನ್ನು ನೋಡುತ್ತ ಅಲೀ ತನ್ನೊಳಗೇ ನಕ್ಕನು.

ಸೋಮಾರಿ ತನ್ನ ಗುಡಿಸಲಿಗೆ ಹೋಗಿ, ಅರವತ್ತು ಬೆಳ್ಳಿ ನಾಣ್ಯಗಳಿರುವ ಜಾಡಿಯನ್ನು ಎತ್ತಿ ಅಲೀಯ ಮನೆಯೊಳಗೆ ಪ್ರವೇಶಿಸಿದನು. ಅಲ್ಲಿ ಅದನ್ನು ಮೊದಲಿದ್ದ ಜಾಗದಲ್ಲೇ ಹುಗಿದಿಟ್ಟು, ಬೇಗಬೇಗನೇ ಭೋಜನಶಾಲೆಗೆ ಹಿಂದಿರುಗಿ ಬಂದನು.

ಭರ್ಜರಿಯಾಗಿ ಔತಣದ ಊಟ ಮುಗಿಯಿತು. ತನ್ನ ಉಪಾಯ ನಾಟಿತೆಂದು ಅಲೀಯೂ, ತನ್ನ ಯೋಜನೆ ಈಡೇರಿತೆಂದು ಸೋಮಾರಿ ದುಷ್ಟನೂ ಬಹಳ ಸಂತೋಷದಲ್ಲಿ ತೇಗುಬಿಟ್ಟರು.

ಅಲೀ ಭೋಜನಶಾಲೆಯಿಂದ ಮನೆಗೆ ಬಂದ ಕೂಡಲೇ, ಸೋಮಾರಿ ತಂದು ಹುಗಿದಿಟ್ಟ ಜಾಡಿಯನ್ನು ಅಲ್ಲಿಂದ ತೆಗೆದು ಮತ್ತೊಂದು ಕಡೆಯಲ್ಲಿ ಅಡಗಿಸಿಟ್ಟು, ರಾತ್ರಿಯಲ್ಲಿ ಹಾಯಾಗಿ ನಿದ್ರಿಸಿದನು.

ಮರುದಿನ ರಾತ್ರಿ ಸೋಮಾರಿ ರಹಸ್ಯವಾಗಿ ಜಾಡಿಯನ್ನು ಎಬ್ಬಿಸಿಕೊಂಡು ಬರಲು ಅಲೀಯ ಮನೆಯೊಳಗೆ ಹೊಕ್ಕನು. ಈಗ ಅವನಲ್ಲಿ ಉಕ್ಕುತ್ತಿದ್ದ ಆನಂದದ ವೇಗವು ಬಹು ತೀವ್ರವಾಗಿತ್ತು. ಈಗ ಆ ಜಾಡಿಯಲ್ಲಿರುವುದು ಅರುವತ್ತು ಬೆಳ್ಳಿ ನಾಣ್ಯಗಳಲ್ಲ, ಅರುವತ್ತೈದು ! ಈಗ ಅದು ಮೊದಲಿಗಿಂತ ಹೆಚ್ಚು ಭಾರವಾದ ಜಾಡಿ.

ಸೋಮಾರಿ ಜಾಡಿಯನ್ನು ಹುಗಿದ ಜಾಗವನ್ನು ಅಗೆಯುತ್ತಾ ಇರುವಾಗ, ಅವನ ಹಿಂದಿನಿಂದ ಅವಹೇಳನೆಯಾಗಿ ನಗುವ ಶಬ್ದ ಕೇಳಿಸಿತು. ನೋಡಿದರೆ ಅಲೀ ! "ಆಹಾ ! ಎಷ್ಟೊಂದು ಒಳ್ಳೆಯ ಔತಣದೂಟ ! ನಿನಗೆ ಅಭಿನಂದನೆ ಹೇಳೋಣವೆಂತಲೇ ಬಂದೆ" ಎಂದ ಅಲೀ ನಗುತ್ತ.

ಮರುಕ್ಷಣದಲ್ಲಿ ಆ ಸೋಮಾರಿ ಎದ್ದು ಬಹು ಚುರುಕಾಗಿ ಬೀದಿಗೆ ಓಡಿದನು. ಆಮೇಲೆ ಅವನು ಎಂದಿಗೂ ಅಲೀಯ ನೆರಳಿಗೂ ಬರಲಿಲ್ಲ.





# ದೆವ್ವ-ದೇವತೆ

ಒಂದು ಕಾಲದಲ್ಲಿ ವರದೇಶ್ವರವೆಂಬ ಒಂದು ಗ್ರಾಮದ ಕೊನೆಯಲ್ಲಿ ಗ್ರಾಮ ದೇವತೆಯ ಗುಡಿಯೊಂದಿದ್ದಿತು. ಆ ಗುಡಿಗೆ ಮಾನ್ಯವಾಗಿ ಬಂದ ಸೊತ್ತು ದೊಡ್ಡದಾಗಿದ್ದಿತು. ದೇವತೆಗೆ ಕೂಡಾ ಬೆಲೆ ಬಾಳುವ ಆಭರಣಗಳು ಸಾಕಷ್ಟಿದ್ದುವು. ಪ್ರತಿ ದಿನವೂ ಬಂದು ಹೋಗುವ ಭಕ್ತರಿಂದ ಗುಡಿಯ ಪ್ರಾಂಗಣವು ಜನಸಂದಣಿಯಿಂದ ಕೂಡಿಕೊಂಡಿದ್ದಿತು.

ಒಂದು ದಿನ ಕತ್ತಲೆ ಬೀಳುವ ಹೊತ್ತಿನಲ್ಲಿ ಗ್ರಾಮದೇವತೆ ಗುಡಿಯೊಳಗಿನಿಂದ ಹೊರಗೆ ಬಂದು ಆವರಣದ ಒಂದು ಮೂಲೆಯಲ್ಲಿದ್ದ ಬೇವಿನ ಮರದ ಮೇಲೆ ಕುಳಿತುಕೊಂಡಳು. ಆ ಮರಕ್ಕೆ ದೂರದಲ್ಲಿ ಶಿಥಿಲವಾಗಿ ಹೋದ ಒಂದು ಕೋಟೆಯ ಬದಿಯಲ್ಲಿ ಹುಣಿಸೇ ಮರದಲ್ಲಿ ಒಂದು ದೆವ್ವವು ವಾಸವಾಗಿದ್ದಿತು.

ಆ ದೆವ್ವವು ಊರೊಳಗಿನ ಜನರಾರಿಗೂ ಕೇಡು ಬಗೆಯುವಂತಹುದಲ್ಲವಾದುದರಿಂದ ಈ ಗ್ರಾಮ ದೇವತೆಗೆ ಅದರ ಮೇಲೆ ಸ್ವಲ್ಪಮಟ್ಟಿಗೆ ಆದರ ಭಾವವೇ ಇದ್ದಿತು. ಆ ಕಾರಣದಿಂದ ಗ್ರಾಮ ದೇವತೆ ಆ ದೆವ್ವದೊಂದಿಗೆ ಮಾತಾಡುವುದುಂಟು.

ಆ ದಿನವೂ ಗ್ರಾಮ ದೇವತೆ ಆ ಹುಣಿಸೇ ದೆವ್ವದೊಂದಿಗೆ ಮಾತಿಗೆ ತೊಡಗಿದಳು. ಊರೊಳಗಿನ ಭಕ್ತ ಜನರು ತನಗೆ ಎಷ್ಟೆಷ್ಟು ದೊಡ್ಡ ರೀತಿಯಲ್ಲಿ ಪೂಜೆ ಮಾಡಿ, ಕಾಣಿಕೆಗಳನ್ನು ಕೊಡುತ್ತಾರೆಂಬುದನ್ನು ಬಹಳ ಹೆಮ್ಮೆ ಗೆಲ್ಮೆಗಳಿಂದ ದೆವ್ವದೊಂದಿಗೆ ವಿವರವಾಗಿ ಹೇಳಿದಳು.

ಅದನ್ನೆಲ್ಲ ಕೇಳಿ ದೆವ್ವವು ಮುಗುಳು ನಗುತ್ತ, "ಅಮ್ಮಾ, ನೀನು ತೀರಾ ಮುಗ್ಧ ಗುಣದವಳು. ಮನುಷ್ಯರು ದೊಡ್ಡ ಮೋಸಗಾರರೆಂದು ನಿನಗೆ ತಿಳಿಯದು. ಅವರೊಳಗೆ ಅವರೇ ಮೋಸ ಮಾಡುವುದು ಸಾಲದೆ, ದೇವತೆಗಳೊಂದಿಗೆ ಕೂಡಾ ಅಗತ್ಯ ಬಿದ್ದ ಹಾಗೆ ಭಕ್ತಿ ಗೌರವಗಳನ್ನು ನಟಿಸಿ ಕಣ್ಣು ಮುಚ್ಚಾಲೆಯಾಡುತ್ತಾರೆ. ನಿನ್ನ ಹೆಸರು ಹೇಳಿಕೊಂಡು ನಿನ್ನ ಸೊತ್ತು ತಿಂದು ಬದುಕುವ ದೊಡ್ಡ ಮನುಷ್ಯರಂಥವರು ಈ ಗ್ರಾಮದಲ್ಲಿ ಕೆಲವರಿದ್ದಾರೆಂದು ನನಗೆ ಗೊತ್ತು" ಎಂದಿತು.

ಆ ಮಾತುಗಳನ್ನು ಕೇಳಿ ಗ್ರಾಮ ದೇವತೆಗೆ ಕೋಪ ಬಂತು. ಅವಳು ದೆವ್ವವನ್ನು ನೋಡಿ, "ನಿನಗೆ ಮನುಷ್ಯರೆಂದರೆ ಹಿಡಿಸದೆಂದು ಕಾಣುತ್ತದೆ.

ವಿ. ಆರ್. ಜಯರಾಂ



ಆದುದರಿಂದಲೇ ಹೀಗೆಲ್ಲಾ ಹೇಳುವಿ. ನನ್ನ ಭಕ್ತರು ನಾನು ಗೀಚಿದ ಗೆರೆ ದಾಟುವವರಲ್ಲವೆಂದು ನಿರೂಪಿಸಿ ತೋರಿಸುತ್ತೇನೆ" ಎಂದಳು.

ಆ ಸಮಯದಲ್ಲಿ ಆ ಗ್ರಾಮದಲ್ಲಿದ್ದ ಮಹಾ ಮಾಂತ್ರಿಕ ಭೂತವೈದ್ಯನು ಅಲ್ಲಿಗೆ ಬಂದು ಕೈ ಜೋಡಿಸಿ ಗುಡಿಗೆ ಪ್ರದಕ್ಷಿಣೆ ಮಾಡಿಕೊಂಡಿದ್ದನು.

ಗ್ರಾಮದೇವತೆ ದೆವ್ವಕ್ಕೆ ಅವನನ್ನು ತೋರಿಸಿ, "ಇವನು ಬಹಳ ದಿನಗಳಿಂದ ನನ್ನನ್ನು ಬಹಳ ಭಕ್ತಿಯಿಂದ ಭಜಿಸುತ್ತಾನೆ. ಪಾಪ, ಬಹಳ ಬಡವ. ಈ ದಿನ ರಾತ್ರಿ ಇವನ ಮೇಲೆ ನನ್ನ ಅನುಗ್ರಹ ತೋರಿಸಬೇಕೆಂದಿದ್ದೇನೆ" ಎಂದಳು.

"ಹುಂ. ಹಾಗೆಯೇ ಮಾಡಮ್ಮ. ಇವನು ನಿನ್ನ ಮೇಲೆ ಎಷ್ಟರಮಟ್ಟಿಗೆ ಭಕ್ತಿಯುಳ್ಳವನೆಂದು ಪರೀಕ್ಷೆ ಮಾಡಲು ನನಗೂ ಅವಕಾಶ ಕೊಡು. ನಾನೂ ಅವನಿಗೆ ನನ್ನ ಕೈಲಾದ ಸಹಾಯ ಮಾಡುತ್ತೇನೆ" ಎಂದಿತು ದೆವ್ವ.

ಆ ದಿನ ರಾತ್ರಿ ಗ್ರಾಮದೇವತೆ ಭೂತವೈದ್ಯನ ಸ್ವಪ್ನದಲ್ಲಿ ಪ್ರತ್ಯಕ್ಷಳಾಗಿ, "ಭಕ್ತನೇ ! ನಾನು ನಿನ್ನನ್ನು ಕಟಾಕ್ಷಿಸಲು ಬಂದೆನು. ಬೆಳಗಾದ ಮೇಲೆ ಈ ಗುಡಿಯ ಧರ್ಮಕರ್ತನನ್ನು ನೋಡು" ಎಂದು ಹೇಳಿ ಮಾಯವಾದಳು. ಆಗಲೇ ಅವಳು ಧರ್ಮಕರ್ತನ ಕನಸಿನಲ್ಲಿ ಪ್ರತ್ಯಕ್ಷಳಾಗಿ. ಭೂತವೈದ್ಯನನ್ನು ತನ್ನ ಆಲಯದ ಲೆಕ್ಕ ನೋಡುವ ಕೆಲಸದಲ್ಲಿ ನಿಯಮಿಸಬೇಕೆಂದು ಆಜ್ಞೆಮಾಡಿ ಮಾಯವಾದಳು.

ಬೆಳಗ್ಗೆ ಭೂತವೈದ್ಯನು ಗುಡಿಯ ಧರ್ಮಕರ್ತನನ್ನು ನೋಡಲು ಹೋದನು. ಧರ್ಮಕರ್ತನೂ ಏನೂ ತಿಳಿಯದವನಂತೆ ನಟಿಸಿ, ಅವನಿಗೆ ಬಂದ ಕನಸಿನ ಸಂಗತಿಯನ್ನು ಕೇಳಿ ತಿಳಿದು ಆಶ್ಚರ್ಯ ತೋರಿಸಿ, "ಎಲ ! ಗುಡಿಯ ಅಮ್ಮನವರು ನಿನಗೆ ಹಾಗೆ ಹೇಳಿದಳೆ? ಆ ತಾಯಿ ನನ್ನೊಂದಿಗೆ ಮುಂದಾಗಿ ಸ್ವಲ್ಪ ಮಾತ್ರವಾದರೂ ಸೂಚನೆ ಕೊಟ್ಟಿದ್ದರೆ ಎಷ್ಟು ಒಳ್ಳೆಯದಿತ್ತು ! ಆ ಲೆಕ್ಕ ನೋಡುವ ಕೆಲಸವನ್ನು ಒಬ್ಬನಿಗೆ ಕೊಡುವೆನೆಂದು ಆಗಲೇ ಮಾತು ಕೊಟ್ಟುಬಿಟ್ಟೆನಲ್ಲ !" ಎಂದನು.

ಭೂತವೈದ್ಯನು ತಲೆತುರಿಸಿಕೊಳ್ಳುತ್ತಾ, ತನ್ನ ದುರದೃಷ್ಟವೆಂದುಕೊಂಡು ಹೊರಟುಹೋದನು. ಆ ದಿನ ಸಾಯಂಕಾಲ ಧರ್ಮಕರ್ತನು ಗುಡಿಯೊಳಗೆ ಹೋಗಿ, ಅಮ್ಮನವರ ಮುಂದೆ ಸಾಷ್ಟಾಂಗ ಬಿದ್ದು, "ಅಮ್ಮಾ, ರಾತ್ರಿ ಕನಸಿನಲ್ಲಿ ನಾನು ನಿನ್ನೊಂದಿಗೆ ಮಾತಾಡಬೇಕೆಂದಿರುವಾಗಲೇ ನೀನು ಮಾಯವಾಗಿ ಹೋದೆ. ನಾನು ನಿನ್ನೆಯೇ ಒಬ್ಬನಿಗೆ ಮಾತು ಕೊಟ್ಟುಬಿಟ್ಟಿದ್ದೇನೆ. ನಿನ್ನ ಭಕ್ತರು ಮಾತು ತಪ್ಪುವವರಲ್ಲವಷ್ಟೆ? ಈಗ ಕೊಟ್ಟ ಮಾತು ತಪ್ಪುವುದು ಸರಿಯೇ ಹೇಳಮ್ಮ !" ಎಂದು ಕಣ್ಣೀರು ಸುರಿಸಿ ಹೊರಟುಹೋದನು.

ಅವನ ಕಣ್ಣೀರನ್ನು ಭಕ್ತಿಬಾಷ್ಪವೆಂದುಕೊಂಡು ಗ್ರಾಮದೇವತೆ ಕರಗಿಹೋದಳು. ಈ ಧರ್ಮಕರ್ತ

ನಿಗೆ ತಾನು ಮೊದಲೇ ಹೇಳಬೇಕಿತ್ತು, ಎಂದು ಕೊಂಡಳು. ಆ ಕೆಲಸವನ್ನು ಭೂತವೈದ್ಯನಿಗೆ ಕೊಟ್ಟುಬಿಟ್ಟರೆ ತನಗೆ ಸೊತ್ತು ಅಪಹರಿಸಲು ಸಾಧ್ಯವಾಗದುದರಿಂದಲೇ ಧರ್ಮಕರ್ತನು ಕಪಟನಾಟಕ ಆಡುವನೆಂದು ಗ್ರಾಮದೇವತೆಗೆ ಗೊತ್ತಾಗಲಿಲ್ಲ.

ಇದನ್ನೆಲ್ಲ ಹುಣಿಸೇ ದೆವ್ವವು ಗಮನಿಸಿಕೊಂಡೇ ಇದ್ದಿತು. ಆ ದಿನ ರಾತ್ರಿ ಹುಣಿಸೇ ದೆವ್ವವು ಭೂತ ವೈದ್ಯನ ಕನಸಿನಲ್ಲಿ ತೋರಿ, "ಅಪ್ಪಾ, ನೀನು ನನ್ನ ಭಕ್ತನೇನಲ್ಲದಿದ್ದರೂ ನಿನಗೆ ಸಹಾಯ ಮಾಡೋಣವೆಂದು ನನಗೆ ತೋರಿತು. ನಾನು ಈ ಊರಿನ ಗ್ರಾಮಾಧಿಕಾರಿಯ ಮಗಳನ್ನು ಹಿಡಿದುಕೊಳ್ಳುತ್ತೇನೆ. ನಿನ್ನ ಹೊರತು ಬೇರೆ ಯಾವ ಮಂತ್ರಗಾರರಿಗೂ ನಾನು ಬಗ್ಗಲಾರೆ. ನೀನು ಬಂದ ಕೂಡಲೇ ಅವಳನ್ನು ಬಿಟ್ಟು ಹೋಗುತ್ತೇನೆ. ಜನರಲ್ಲಿ ನಿನಗೆ ಹೆಸರಿನೊಂದಿಗೆ ಹಣವೂ ದೊರೆಯುತ್ತದೆ. ನಿನ್ನ ಸಂತೋಷ ನನಗೂ ಸಂತೋಷವೇ" ಎಂದಿತು.

ಭೂತವೈದ್ಯನು ಸಂತೋಷದಿಂದ ಒಪ್ಪಿದನು. ಮರುದಿನ ಆ ಗ್ರಾಮದ ಅಧಿಕಾರಿಯ ಮಗಳಿಗೆ ದೆವ್ವ ಹಿಡಿಯಿತೆಂದು ಊರೆಲ್ಲ ಹೇಳಿಕೊಂಡರು. ಭೂತವೈದ್ಯನು ಒಂದೆರಡು ದಿನ ತಾಳಿ ಅಲ್ಲಿಗೆ ಹೋಗಬೇಕೆಂದುಕೊಂಡನು.

ಭೂತವೈದ್ಯನಿಗೆ ಹುಣಿಸೇ ದೆವ್ವವು ಸಹಾಯ ಮಾಡುವುದೆಂದು ಗ್ರಾಮದೇವತೆಗೆ ತಿಳಿಯಿತು. ಅವಳು ಭೂತವೈದ್ಯನ ಕನಸಿನಲ್ಲಿ ಮತ್ತೆ ಪ್ರತ್ಯಕ್ಷಳಾದಳು. ಅವಳನ್ನು ನೋಡಿ ಭೂತವೈದ್ಯನು, "ಇದೇನಮ್ಮ! ಮೊದಲೇ ದರಿದ್ರನಾದ ನನ್ನನ್ನು ಧರ್ಮಕರ್ತನಿಂದ ಅವಮಾನಪಡಿಸಿದಿ!" ಎಂದನು.

ಗ್ರಾಮದೇವತೆ ಅವನೊಂದಿಗೆ, "ನನಗೆ ತಿಳಿಯದೆ ತಪ್ಪಾಗಿಹೋಯಿತು. ಈ ಸಾರಿ ನಿಜವಾಗಿಯೂ ನಿನಗೆ ಒಳಿತೇ ಮಾಡುತ್ತೇನೆ. ನಾಳೆಯೇ ಹೋಗಿ ನಾಮದ ಗೋವಿಂದಶೆಟ್ಟಿಯನ್ನು ನೋಡು. ಅವನಿಂದ ನಿನಗೆ ಧನಸಹಾಯ ಸಿಗುವ ಹಾಗೆ ಮಾಡುತ್ತೇನೆ. ಆದರೆ ಒಂದು ಸಂಗತಿ ನೆನಪಿಟ್ಟುಕೋ, ನಿಜವಾಗಿಯೂ ನಿನಗೆ ನನ್ನ ಮೇಲೆ ಭಕ್ತಿಯಿದ್ದರೆ ಬೇರೆ ಯಾವ ದೇವತೆಯ ಸಹಾಯವನ್ನೂ ಯಾಚಿಸಬಾರದು" ಎಂದಳು.



ಆಮೇಲೆ ಗ್ರಾಮದೇವತೆ ನಾಮದ ಗೋವಿಂದ ಶೆಟ್ಟಿಯ ಕನಸಿನಲ್ಲಿ ಕಾಣಿಸಿ, ಏನು ಮಾಡಬೇಕೆಂಬುದನ್ನು ಹೇಳಿದಳು. ಗೋವಿಂದಶೆಟ್ಟಿ ಭಕ್ತಿಯಿಂದ ಕೈಜೋಡಿಸಿ, "ನಿನ್ನ ಇಷ್ಟವೇ ನನ್ನ ಇಷ್ಟತಾಯಿ!" ಎಂದನು.

ಮರುದಿನ ಭೂತವೈದ್ಯನು ತನ್ನ ಬಳಿಗೆ ಬರುತ್ತಲೇ ಗೋವಿಂದಶೆಟ್ಟಿ ಅವನನ್ನು ನೋಡಿ, ಬಹಳ ಕೋಪದಿಂದ, "ಬಂದೆಯಾ? ಅಮ್ಮನವರಿಗೇನು ಗೊತ್ತು ನನ್ನ ಕಷ್ಟ? ಕಾಸಿಗೆ ಕಾಸು ಸೇರಿಸಿ ಏನೋ ಈ ಸ್ಥಿತಿಗೆ ಬಂದಿದ್ದೇನೆ. ಹೀಗೆಲ್ಲಾ ದಾನಾ ಧರ್ಮಾ ಮಾಡುವ ಪದ್ಧತಿ ನಮ್ಮ ಮನೆತನದಲ್ಲೇ

ಇಲ್ಲ. ಅಮ್ಮನವರು ಕೊಡು ಅನ್ನುವುದೆಂದರೇನು ? ನೀನು ಕೇಳಲು ಬರುವುದೂ ಅಂದರೇನು ? ಏನೋ ಅಮ್ಮನವರ ಮಾತಿಗೆ ಗೌರವ ಕೊಟ್ಟು ಈ ಕಾಲು ವರಹಾ ಕೊಡುತ್ತೇನೆ. ಸಂತೋಷದಿಂದ ತೆಗೆದು ಕೊಂಡು ಹೋಗು" ಎಂದು ಭೂತವೈದ್ಯನ ಕೈಗೆ ಚಿಕ್ಕ ನಾಣ್ಯವನ್ನು ಹಾಕಿದನು.

ಭೂತವೈದ್ಯನು ರೋಷದಿಂದ ಅದನ್ನು ನೆಲಕ್ಕೆ ಒಗೆದು ಹೊರಟುಹೋದನು.

ಆಮೇಲೆ ಗೋವಿಂದಶೆಟ್ಟಿ ಶುಚಿಯಾಗಿ ಸ್ನಾನ ಮಾಡಿ ಹಣೆಗೆ ಥಾಳಾಗಿ ನಾಮ ತಿದ್ದಿ ಗ್ರಾಮ ದೇವತೆಯ ಗುಡಿಗೆ ಹೋಗಿ, ಅಮ್ಮನವರ ಮುಂದೆ ಸಾಷ್ಟಾಂಗ ಬಿದ್ದು, "ಅಮ್ಮಾ! ಏನು ಹೇಳಲಿ? ನನ್ನ ಬದುಕು ಕಸಕಡ್ಡಿಗಿಂತಲೂ ಕಡಿಮೆಯಾಗಿ ಹೋಯಿತು. ನನ್ನ ಹೆಂಡತಿಯನ್ನು ನಂಬಿ ಆಸ್ತಿ ಪೂರಾ ಅವಳ ಹೆಸರಿಗೆ ಬರೆಸಿಬಿಟ್ಟೆನು. ರಾತ್ರಿ ನಿನ್ನ ಆಜ್ಞೆಯನ್ನು ಅವಳ ಹತ್ತಿರ ಹೇಳಿದರೆ, ಅವಳು ಮಹಾಂಕಾಳಿಯ ಹಾಗೆ ನನ್ನನ್ನು ಮನೆಯಿಂದ ಓಡಿಸುತ್ತೇನೆಂದು ಕೂಗಾಡಿದಳು. ಕ್ಷಮಿಸಮ್ಮಾ. ನಿನ್ನ ಆಜ್ಞೆಯನ್ನು ನೆರವೇರಿಸಲಾಗದ ಪುಕ್ಕಲು ಭಕ್ತ ನಾನು" ಎಂದು ಹೇಳಿಕೊಂಡು ಮನೆಗೆ ಹಿಂದಿರುಗಿದನು.

ಗ್ರಾಮದೇವತೆ ಅವನ ಮೇಲೆ ಕನಿಕರಪಡುತ್ತ, "ಪಾಪ! ನನ್ನ ಮೇಲೆ ಎಷ್ಟು ಭಕ್ತಿ ಇದ್ದರೂ ಕಟ್ಟಿಕೊಂಡವಳೇ ತಿರುಗಿಬಿದ್ದರೆ ಏನು ಮಾಡಿಯಾನು!" ಎಂದುಕೊಂಡಳು.

ಭೂತವೈದ್ಯನು ನಾಲ್ಕು ದಿನಗಳ ಮೇಲೆ ಗ್ರಾಮಾಧಿಕಾರಿಯ ಮನೆಗೆ ಹೋಗಿ, ಅವನ ಮಗಳಿಗೆ ಹಿಡಿದ ದೆವ್ವವನ್ನು ತಾನು ಓಡಿಸುವೆನೆಂದನು. ಯಾರಿಗೂ ಬಗ್ಗದ ಆ ದೆವ್ವವು ಭೂತವೈದ್ಯನ ಮಂತ್ರಗಳಿಂದ ಹೊರಟುಹೋಯಿತು. ಮಗಳನ್ನು ಗುಣಪಡಿಸಿದ ಭೂತವೈದ್ಯನಿಗೆ ಗ್ರಾಮಾಧಿಕಾರಿ ತುಂಬಾ ಬಹುಮಾನ ಕೊಟ್ಟು ಕಳುಹಿಸಿದನು. ಆದರಿಂದ ಅವನಿಗೆ ಗಟ್ಟಿಗನಾದ ಭೂತವೈದ್ಯನೆಂದು ದೊಡ್ಡ ಹೆಸರು ಬಂದಿತು.



ಈ ಸಾರಿ ಆ ಹುಣಿಸೇ ದೆವ್ವವು ಮುಂದಾಗಿ ಅವನಿಗೆ ಕನಸಿನಲ್ಲಿ ತಿಳಿಸಿ, ಪಕ್ಕದ ಊರಿನ ಜಮೀನ್ದಾರನ ಮಗಳನ್ನು ಹಿಡಿದುಕೊಂಡಿತು.

ಭೂತವೈದ್ಯನಿಗೆ ತನ್ನ ಮೇಲಿರುವ ಭಕ್ತಿಗಿಂತಲೂ, ಹುಣಿಸೇ ದೆವ್ವದ ಮೇಲೆ ಹೆಚ್ಚು ಭಕ್ತಿಯಾಗುವುದೆಂಬುದನ್ನು ಸಹಿಸಲಾಗದ ಗ್ರಾಮ ದೇವತೆ, ಮತ್ತೊಂದು ರಾತ್ರಿಯಲ್ಲಿ ಭೂತವೈದ್ಯನ ಸ್ವಪ್ನದಲ್ಲಿ ಕಾಣಿಸಿದಳು.

ಭೂತವೈದ್ಯನು ಕನಸಿನಲ್ಲೇ ಅವಳಿಗೆ ಕೈಮುಗಿದು, "ಮಹಾತಾಯಿ! ನಿನಗೂ ನಿನ್ನ ಉಪಕಾರಕ್ಕೂ ದೊಡ್ಡ ನಮಸ್ಕಾರ. ಏನೋ ಹುಣಿಸೇ ದೆವ್ವದ ಪುಣ್ಯದಿಂದ ಲಕ್ಷಣವಾಗಿಯೇ ಬದುಕಿಕೊಂಡಿದ್ದೇನೆ. ನನ್ನನ್ನು ಸಮ್ಮನೆ ಬಿಡಮ್ಮ" ಎಂದನು.

ಗ್ರಾಮ ದೇವತೆಗೆ ಅವನ ಮಾತು ಅವಮಾನಕರವೆನಿಸಿದರೂ ಶಾಂತತೆಯನ್ನು ವಹಿಸಿ, "ನೋಡಪ್ಪಾ, ನಿನಗೆ ಇದೇ ನನ್ನ ಕೊನೆಯ ಸಹಾಯ. ಈ ನಡುವೆ ಸ್ವಲ್ಪ ಕಾಲದಿಂದ ರಾಮಕೋಟಿ ಬರೆಯುತ್ತಿರುವ ಶಿವರಾಮಯ್ಯನನ್ನು ಹೋಗಿ ನೋಡು. ಅವನಿಗೆ ಹೇರಳವಾಗಿ ಆಸ್ತಿಯಿದೆ. ವಾರಸುದಾರರೂ ಅವನಿಗಿಲ್ಲ. ನಿನ್ನ ಸಂಗತಿ ಅವನಿಗೆ ಹೇಳುತ್ತೇನೆ. ಆಮೇಲೆ ಹುಣಿಸೇ ದೆವ್ವದೊಂದಿಗೆ ಸಂಬಂಧ ಇಟ್ಟುಕೊಳ್ಳಲಾರೆನೆಂದು ಮಾತುಕೊಡು" ಎಂದಳು.

ಭೂತವೈದ್ಯನು ಅರೆಮನಸ್ಸಿನಿಂದ ಗ್ರಾಮ ದೇವತೆಗೆ ಮಾತು ಕೊಟ್ಟು, ಮರುದಿನ ರಾಮಕೋಟಿ ಬರೆಯುವ ಶಿವರಾಮಯ್ಯನ ಬಳಿಗೆ ಹೋದನು. ಆ ಸಮಯದಲ್ಲಿ ಅತ್ಯಂತ ದೀಕ್ಷೆಯಿಂದ ರಾಮಕೋಟಿ ಬರೆಯುತ್ತಿದ್ದ ಶಿವರಾಮಯ್ಯ, ಸ್ವಲ್ಪ ತಡೆಯುವಂತೆ ಭೂತವೈದ್ಯನಿಗೆ ಸನ್ನೆ ಮಾಡಿದನು.

ಸುಮಾರು ಕಾಲು ಗಂಟೆಯ ಮೇಲೆ ಶಿವರಾಮಯ್ಯ ಏನೋ ವಿಚಿತ್ರವನ್ನು ನೋಡುವಂತೆ ಭೂತವೈದ್ಯನನ್ನು ನೋಡುತ್ತ, "ರಾತ್ರಿಯಲ್ಲಿ ಗ್ರಾಮ ದೇವತಾ ಅಮ್ಮನವರು ನಿನ್ನನ್ನು ಕುರಿತು ಹೇಳಿದಳಪ್ಪಾ. ಆ ದೇವತೆಯನ್ನು ಪೂಜಿಸಿದಷ್ಟು ಕಾಲವೂ





ನನಗೇನೂ ಒಳಿತಾಗಲಿಲ್ಲ. ಇದನ್ನು ಆಕೆಯೊಂದಿಗೆ ಹೇಳಲಿಕ್ಕಾಗುತ್ತದೆಯೆ ? ಈಗ ರಾಮಕೋಟಿ ಬರೆಯಲು ಶುರು ಮಾಡಿದ ಮೇಲೆ ಬಹಳವಾಗಿ ಶಾಂತಿ ಬಂದಿದೆ. ಇದು ಪೂರ್ತಿಯಾಗಿಬಿಟ್ಟರೆ ನನ್ನ ಪುಣ್ಯಕ್ಕೆ ಸಾಟಿಯಿರದು. ನನ್ನ ಆಸ್ತಿಯನ್ನು ನನಗೆ ಹಿಡಿಸಿದ ಯಾರಿಗಾದರೂ ಕೊಟ್ಟು ಕಣ್ಣು ಮುಚ್ಚುತ್ತೇನೆ. ಇದು ಯಥಾಸ್ಥಿತಿ" ಎಂದನು.

ಭೂತವೈದ್ಯನು ಅವಮಾನದಿಂದ ಕುಂದಿಹೋಗಿ ಮನೆಗೆ ಹಿಂದಿರುಗಿದನು. ಆಗ ದಾರಿಯಲ್ಲಿ ಜಮೀನ್ದಾರನ ಸೇವಕನು ಅವನನ್ನು ತಡೆದು, ಜಮೀನ್ದಾರನ ಮಗಳಿಗೆ ಹಿಡಿದ ದೆವ್ವದ ಸಂಗತಿಯನ್ನು ಹೇಳಿದನು. ಅವನು ನೆಟ್ಟಗೆ ಜಮೀನ್ದಾರನ ಮನೆಗೆ ಹೋದನು. ಜಮೀನ್ದಾರನು ಅವನನ್ನು ಗೌರವದಿಂದ ಆದರಿಸಿ, ತನ್ನ ಮಗಳಿರುವ ಕೋಣೆಗೆ ಕಳುಹಿಸಿದನು,

ಭೂತವೈದ್ಯನು ಕೋಣೆಯೊಳಗೆ ಹೋಗಿ ಬಾಗಿಲು ಮುಚ್ಚಿದ ಕೂಡಲೇ ಜಮೀನ್ದಾರನ ಮಗಳನ್ನು ಹಿಡಿದ ಹುಣಿಸೇ ಮರದ ದೆವ್ವವು ಚಪ್ಪಾಳೆ ತಟ್ಟಿ, ಕೇಕೇ ಹಾಕುತ್ತ, "ಊಹುಂ, ನಾನು ಇವಳನ್ನು ಬಿಟ್ಟು ಹೋಗಲಾರೆ, ನನಗೆ ಇಲ್ಲಿ ಚೆನ್ನಾಗಿದೆ. ರುಚಿಯಾದ ಊಟ, ಮೃದುವಾದ ಹಾಸಿಗೆ. ನಾನು ಇಲ್ಲಿಯೇ ಇರುತ್ತೇನೆ. ನೀನು ಸುಮ್ಮನೆ ಹೊರಟು ಹೋಗು" ಎಂದು ಮತ್ತೆ ಕೇಕೆ ಹಾಕಿತು.

ದೆವ್ವವು ಹೇಳಿದ ಮಾತು ಕೇಳಿ ಭೂತವೈದ್ಯನ ತಲೆಯ ಮೇಲೆ ಸಿಡಿಲು ಬಿದ್ದ ಹಾಗಾಯಿತು. ತಾನು ದೆವ್ವವನ್ನು ಓಡಿಸದೆ ಹೋದರೆ ಜಮೀನ್ದಾರನು ಕೋಪಗೊಂಡು ತಲೆ ಕಡಿಸಿಯಾನು. ದೆವ್ವವು ಹೋಗಲಾರೆನೆನ್ನುತ್ತದೆ. ಈ ಇಕ್ಕಟ್ಟಿನಿಂದ ಹೊರಬೀಳುವುದು ಹೇಗೆಂದು ತಿಳಿಯದೆ ಅವನು ಅತ್ಯಂತ ದಿಗಿಲಿನಿಂದ, ಪೂಜಾ ಸಾಮಗ್ರಿ ಮರೆತೆನೆಂದು ಹೇಳಿ, ನಾಳೆ ಬರುವೆನೆಂದು ನಂಬಿಸಿ, ಮನೆಗೆ ಹಿಂದಿರುಗಿದನು.

ಆ ದಿನ ರಾತ್ರಿ ಭೂತವೈದ್ಯನಿಗೆ ನಿದ್ದೆಯೇ ಬರಲಿಲ್ಲ. ರಾತ್ರಿ ಮೂರನೇ ಜಾಮವು ನಡೆಯುತ್ತಿದ್ದಾಗ ಅವನಿಗೆ ನಿದ್ದೆ ಹಿಡಿಯಿತು. ಆ ಸಮಯದಲ್ಲಿ ಗ್ರಾಮದೇವತೆ ಅವನ ಸ್ವಪ್ನದಲ್ಲಿ ಪ್ರತ್ಯಕ್ಷಳಾಗಿ, "ಎಷ್ಟಾದರೂ ದೆವ್ವವು ದೆವ್ವವೇ ! ಅದರ ಮಾತು ನಂಬಿ ನೀನು ಇಕ್ಕಟ್ಟಿನಲ್ಲಿ ಸಿಕ್ಕಿರುವೆ. ಹೀಗೆ ಮಾಡು !" ಎಂದು ಅವನಿಗೊಂದು ಉಪಾಯವನ್ನು ಹೇಳಿ ಅಂತರ್ಧಾನಳಾದಳು.

ಮರುದಿನ ಅವನು ಒಂದು ಗಾಜಿನ ಜಾಡೀ ಹಿಡಿದುಕೊಂಡು ಜಮೀನ್ದಾರನ ಮನೆಗೆ ಹೋದನು. ಅವನು ಜಾಡಿಯೊಂದಿಗೆ ಮತ್ತೆ ತನ್ನ ಬಳಿಗೆ ಬಂದುದನ್ನು ನೋಡಿ, ಜಮೀನ್ದಾರನ ಮಗಳಿಗೆ ಹಿಡಿದ ದೆವ್ವವು, "ಇದೇನು ವಿಚಿತ್ರ ! ಗಾಜಿನೊಳಗೆ ಪಟ್ಟೇ ಮಂಚದ ಉಯ್ಯಾಲೆ ತೂಗುತ್ತಿದೆಯಲ್ಲಾ ! ಏನಿದು ?" ಎಂದು ಕೇಳಿತು. ಭೂತವೈದ್ಯನು ಪಾಪದವನ ಹಾಗೆ ಮುಗ್ಧಭಾವ ತಂದುಕೊಂಡು,

"ರಾತ್ರಿಯಲ್ಲಿ ನನ್ನ ಗುರು ಘೋರಾಟಕರು ವಿಂಧ್ಯಾರಣ್ಯ ಪ್ರಾಂತದಿಂದ ತಿರುಗಿ ಬಂದರು. ನನ್ನ ಭಕ್ತಿ ವಿಶ್ವಾಸಗಳಿಗೆ ಮೆಚ್ಚಿ ಈ ಜಾಡಿಯನ್ನು ನನಗೆ ಬಹುಮಾನ ಕೊಟ್ಟರು. ಇದರೊಳಗಿನ ಉಯ್ಯಾಲೆಯಲ್ಲಿ ಕುಳಿತವರಿಗೆ ಕೇಳಿಕೊಳ್ಳುವ ರೂಪ ಬಂದು ಬಿಡುತ್ತದೆ. ಆದರೆ ಮನುಷ್ಯರು ಇಷ್ಟು ಚಿಕ್ಕ ಜಾಡಿಯೊಳಗೆ ಹೋಗಲು ಸಾಧ್ಯವಿಲ್ಲವಷ್ಟೆ? ಇದರಿಂದ ಏನು ಉಪಯೋಗವೋ ನಿನ್ನನ್ನೇ ಕೇಳಲು ಬಂದೆನು" ಎಂದನು.

ದೆವ್ವವು ಕೂಡಲೇ ಭೂತವೈದ್ಯನ ಕೈಯನ್ನು ಹಿಡಿದು, "ಇದರಿಂದ ನನಗೆ ಬಹಳ ಉಪಯೋಗವಿದೆ. ನನಗೆ ಸುಂದರ ರೂಪ ಬರಬೇಕೆಂದು ಬಹಳ ಕಾಲದಿಂದ ತಪಿಸಿಕೊಂಡಿದ್ದೇನೆ. ನನ್ನನ್ನು ಒಂದು ಸಾರಿ ಆ ಗಾಜಿನ ಜಾಡಿಯೊಳಗೆ ಹೋಗಿ, ಮಂಚದ ಉಯ್ಯಾಲೆಯಲ್ಲಿ ಕುಳಿತುಕೊಳ್ಳಲು ಬಿಡಯ್ಯ" ಎನ್ನುತ್ತ ದೆವ್ವವು ಹೊಗೆಯ ರೂಪದಲ್ಲಿ ಆ ಜಾಡಿಯೊಳಗೆ ಹೊಕ್ಕಿತು.

ಭೂತವೈದ್ಯನು ತಟ್ಟನೆ ಜಾಡಿಯ ಮುಚ್ಚಳವನ್ನು ಬಿಗಿದನು. ನಡೆದ ಮೋಸವನ್ನು ತಿಳಿದು ದೆವ್ವವು ಕೋಪದಿಂದ ಅರಚಿ, "ಇದು ಹಸಿಹಸೀ ಮೋಸ! ಅನ್ಯಾಯ!" ಎಂದು ಕಿರಿಚಿ ತಿರುಗತೊಡಗಿತು. ಭೂತವೈದ್ಯನು ನಗಾಡಿ, "ಜಮೀನ್ದಾರನ ಮಗಳನ್ನು ಬಿಡಲಾರೆನೆಂದು ನೀನು ಮಾಡಿದ್ದು ಮೋಸವಲ್ಲವೆ? ನಿನ್ನ ಮೋಸ ನನ್ನ ಪ್ರಾಣಕ್ಕೇ ಬಂತು! ನೀನೊಂದು ದೆವ್ವ! ನಾನು ಮನುಷ್ಯ! ಮನುಷ್ಯನಿಗೆ ಸ್ವಲ್ಪ ಆಶೆ ಇರುವುದು ಸಹಜ. ಆಶೆಯೇನಿಲ್ಲದೆ ಇತರ ಮನುಷ್ಯರೊಂದಿಗೆ ಬದುಕಲು ಸಾಧ್ಯವಿಲ್ಲ. ಇದೆಲ್ಲಾ ಗ್ರಾಮ ದೇವತೆಯ ದಯೆ!" ಎಂದು ಹೇಳಿ ಗಾಜಿನ ಜಾಡಿಯನ್ನು ಭೂಮಿಯ ಅಡಿಯಲ್ಲಿ ಹುಗಿದುಬಿಟ್ಟನು.

ಮಗಳಿಗೆ ಹಿಡಿದ ದೆವ್ವವನ್ನು ಬಿಡಿಸಿದುದಕ್ಕೆ ಜಮೀನ್ದಾರನು ಬಹಳ ಸಂತೋಷಪಟ್ಟು, ಭೂತವೈದ್ಯನಿಗೆ ಐದು ಎಕರೆ ಹೊಲಗಳನ್ನು ಬಹುಮಾನವಾಗಿ ಕೊಟ್ಟನು. ಅಷ್ಟೇ ಅಲ್ಲದೆ ಅವನ ಕಾಲಿಗೆ ಬೆಳ್ಳಿಯ ಕಡಗ ತೊಡಿಸಿ ಕುದುರೆಯ ಮೇಲೆ ಗ್ರಾಮಗಳಲ್ಲಿ ಮೆರವಣಿಗೆ ಮಾಡಿಸಿದನು.

ಇಷ್ಟು ನಡೆದ ಮೇಲೆ ಗ್ರಾಮ ದೇವತೆಗೆ ಒಂದು ಸತ್ಯವು ಗೊತ್ತಾಯಿತು. ತಾನು ಮನುಷ್ಯರೆಲ್ಲಾ ಒಳ್ಳೆಯವರೆಂದುಕೊಂಡವಳು. ದೆವ್ವದ ದೃಷ್ಟಿಯಲ್ಲಿ ಎಲ್ಲರೂ ಕೆಟ್ಟವರು. ಆದರೆ ನಿಜ ಸಂಗತಿ ಏನೆಂದರೆ, ಮನುಷ್ಯರಲ್ಲಿ ಒಳ್ಳೆಯದೂ ಕೆಟ್ಟದೂ ಎರಡೂ ಸೇರಿಕೊಂಡಿವೆ. ಇದನ್ನು ತಿಳಿದ ಮೇಲೆ ಗ್ರಾಮ ದೇವತೆ ತಾನಾಗಿ ಮನುಷ್ಯರ ಕನಸಿನಲ್ಲಿ ಬರುವುದನ್ನು ಬಿಟ್ಟು, ಮಾತುಕತೆ ಬಿಟ್ಟು ಮೌನವಹಿಸಿದಳು.



# ವ್ಯಾಪಾರ ರಹಸ್ಯ

**ಭೂ**ಷಣನೂ, ರಾಜಯ್ಯನೂ ಒಂದೇ ಗ್ರಾಮದಲ್ಲಿರುವವರು. ಇಬ್ಬರೊಳಗೆ ಸ್ನೇಹವೂ ಇತ್ತು.

ಭೂಷಣನಿಗೆ ಏನೋ ಅತ್ಯಗತ್ಯ ಪರಿಸ್ಥಿತಿ ಬಂದುದರಿಂದ ತನ್ನ ಕುದುರೇ ಗಾಢಿಯನ್ನು ನೂರು ರೂಪಾಯಿಗೆ ರಾಜಯ್ಯನಿಗೆ ಮಾರಿದನು. ಆದರೆ ಗಾಡಿಯನ್ನು ತುಂಬ ಅಗ್ಗಕ್ಕೆ ಮಾರಿದೆನೆಂಬ ಅನುಮಾನ ಬಂತು. ಆದರ ಪರಿಣಾಮವಾಗಿ ಮತ್ತೊಂದು ವಾರದೊಳಗೆ ಅದನ್ನು ರಾಜಯ್ಯನಿಂದ ಇನ್ನೂರು ರೂಪಾಯಿ ಕೊಟ್ಟು, ತಿರುಗಿ ತಾನೇ ಪಡೆದನು.

ಆಮೇಲೆ ರಾಜಯ್ಯನಿಗೆ ಕುದುರೇ ಗಾಡಿಯ ಅಗತ್ಯ ಬಿದ್ದು, ಅದನ್ನು ಮುನ್ನೂರು ರೂಪಾಯಿಗೆ ಭೂಷಣನಿಂದ ಕೊಂಡುಕೊಂಡನು.

ಈ ರೀತಿಯಾಗಿ ಆ ಕುದುರೇ ಗಾಡಿ ಅವರಿಬ್ಬರ ಅಗತ್ಯಗಳಿಗೆ ತಕ್ಕ ಹಾಗೆ ಅವರೊಳಗೇ ಮಾರಿಕೊಳ್ಳುತ್ತ, ಅದರ ಬೆಲೆ ಎಂಟು ನೂರರವರೆಗೆ ಹೋಯಿತು.

ಅಷ್ಟರಲ್ಲಿ ನೆರೆಯ ಊರಿನ ವ್ಯಾಪಾರಿಯೊಬ್ಬನು ಭೂಷಣನಿಂದ ಸಾವಿರ ರೂಪಾಯಿಗಳಿಗೆ ಅದನ್ನು ಕೊಂಡುಕೊಂಡು ತನ್ನ ಪಾಡಿಗೆ ಹೊರಟುಹೋದನು.

ಈ ಸಂಗತಿಯನ್ನು ತಿಳಿದು ರಾಜಯ್ಯನು ಭೂಷಣನ ಬಳಿಗೆ ಬಂದು ಕೋಪದಿಂದ, "ಭೂಷಣಾ! ನೀನೊಬ್ಬ ಮಹಾ ಮೂರ್ಖ! ನಿನಗೆ ವ್ಯಾಪಾರ ರಹಸ್ಯವೇ ತಿಳಿಯದು. ನಮ್ಮಿಬ್ಬರಿಗೆ ಅಷ್ಟಷ್ಟು ಲಾಭ ಸಂಪಾದಿಸಿ ಕೊಡುತ್ತಾ, ಇದ್ದ ಕುದುರೇ ಗಾಡಿಯನ್ನು ಸುಮ್ಮ ಸುಮ್ಮನೇ ಮೂರನೇಯವನಿಗೆ ಮಾರಿಬಿಟ್ಟೆಯಲ್ಲ!" ಎಂದನು.






"ಸೂತ ಮುನೀಂದ್ರಾ, ಒಂದು ಸಂಗತಿ ನಮಗೆ ಸ್ಪಷ್ಟವಾಗಿ ತಿಳಿದಿಲ್ಲ. ವಿಷ್ಣು ತನ್ನ ಮತ್ತೊಂದು ರೂಪವಾದ ಕೃಷ್ಣನಾಗಿ ಗೋಲೋಕದಲ್ಲಿರುವನೆಂದು ಹೇಳಿದ್ದೀರಿ. ಆ ಕೃಷ್ಣನ ವಿಷಯವನ್ನು ಸ್ವಲ್ಪ ವಿವರವಾಗಿ ತಿಳಿಯಲು ಆಶೆಯಾಗಿದೆ. ದಯವಿಟ್ಟು ಹೇಳಬೇಕು" ಎಂದು ಶೌನಕಾದಿ ಮುನಿಗಳು ಕೇಳಿಕೊಂಡರು. ಆಗ ಸೂತ ಪುರಾಣಿಕನು ಹೀಗೆ ಹೇಳಲು ಪ್ರಾರಂಭಿಸಿದನು :

"ಗೋಲೋಕವೆಂಬುದು ಸತ್ಯಲೋಕಕ್ಕಿಂತ ಮೇಲೆ ಇರುವಂತಹ ಪುಣ್ಯ ಲೋಕ. ಅದು ಅನೇಕ ನಕ್ಷತ್ರ ಸಮುದಾಯಗಳಿಂದ ಯಾವಾಗಲೂ ಬೆಳುದಿಂಗಳಂತಹ ತಣ್ಣನೆಯ ಬೆಳಕಿನಿಂದ ತುಂಬಿಕೊಂಡಿರುತ್ತದೆ. ಅಲ್ಲಿ ವಿಷ್ಣು ಅತಿ ಗಾಢವಾದ ನೀಲರಂಗಿನಲ್ಲಿ ಕಪ್ಪಗೆ ಶೋಭಿಸುತ್ತ ಕೃಷ್ಣನೆಂಬ ಹೆಸರನ್ನು ಪಡೆದಿರುತ್ತಾನೆ. ಅಲ್ಲಿ ದಿವ್ಯವಾದ ವಿರಜಾನದಿ ಪ್ರವಹಿಸಿಕೊಂಡಿರುತ್ತದೆ. ನದಿಯ ತೀರದಲ್ಲಿರುವ ತುಲಸೀ ವನದೊಳಗೆ, ಕೃಷ್ಣನು ಮುರಳಿಯೊಳಗಿನಿಂದ ದಿವ್ಯ ನಾದವನ್ನು ಹೊರಡಿಸುತ್ತಿರುವಾಗ, ಆ ನಾದವೇ ರಾಧೆಯ ರೂಪದಲ್ಲಿ ಅಲ್ಲಿ ಪ್ರತ್ಯಕ್ಷವಾಗಿದೆ. ರಾಧೆಯೂ ಕೃಷ್ಣನೂ ಒಬ್ಬರನ್ನು ಬಿಟ್ಟು ಒಬ್ಬರಿಲ್ಲ. ಪ್ರಕೃತಿಯೇ ರಾಧೆಯೆಂದೂ, ಪುರುಷನೇ ಕೃಷ್ಣನೆಂದೂ ಹೇಳಬಹುದು. ಅವರಿಬ್ಬರೂ ಜತೆಯಾಗಿ ಎಡೆಬಿಡದೆ ಗೋಲೋಕದಲ್ಲಿ ವಿಹರಿಸಿಕೊಂಡಿರುತ್ತಾರೆ. ಸುದಾಮನು ಸದಾಕಾಲವೂ ಕೃಷ್ಣನನ್ನು ಸೇವಿಸಿಕೊಂಡಿರುತ್ತಾನೆ.

ಅಲ್ಲಿ ರಾಧಾದೇವಿಯ ಶರೀರದಿಂದ ಅನೇಕ ಮಂದಿ ಗೋಪಿಕೆಯರು ಹುಟ್ಟಿದರು. ವಿರಜಾನದಿ ಕೂಡಾ ಸ್ತ್ರೀರೂಪ ಧರಿಸಿ ವಿರಜಾದೇವಿಯೆನಿಸಿ ಕೃಷ್ಣನನ್ನು ಪ್ರೇಮದಿಂದ ಆರಾಧಿಸಿಕೊಂಡಿರುತ್ತಾಳೆ. ಒಂದು ಸಾರಿ ರಾಧಾಕೃಷ್ಣರು ಪರಸ್ಪರ ಅನುರಾಗ ಬದ್ಧರಾಗಿ ಏಕಾಂತದಲ್ಲಿರುವಾಗ ಅಲ್ಲಿಗೆ ಕೃಷ್ಣನನ್ನು ನೋಡಲು ವಿರಜಾದೇವಿ ಬಂದಳು. ರಾಧೆ ಕೋಪಗೊಂಡು ಅವಳನ್ನು ಭೂಲೋಕದಲ್ಲಿ ಹುಟ್ಟುವಂತೆ ಶಪಿಸಿದಳು. ಹಾಗೆ ಶಪಿಸಿದ್ದು ಅನುಚಿತವಾಯಿತೆಂದು

೩೦. ಕಲಿಯುಗ ದೈವ



ಸುದಾಮನು ರಾಧೆಯೊಂದಿಗೆ ಹೇಳಿದನು. ಆಗ ರಾಧೆ ಅವನ ಮೇಲೆಯೂ ಕೋಪಿಸಿ, "ನೀನು ಕೂಡಾ ಹೋಗಿ ಭೂಮಿಯಲ್ಲಿ ರಾಕ್ಷಸನಾಗಿ ಹುಟ್ಟು!" ಎಂದು ಶಾಪಕೊಟ್ಟಳು.

ವಿರಜಾದೇವಿ ರಾಜಕುಮಾರಿಯಾಗಿ ಭೂಮಿಯಲ್ಲಿ ಹುಟ್ಟಿ, ತುಲಸೀ ಎಂದೂ ಬೃಂದಾ ಎಂದೂ ಹೆಸರು ಪಡೆದಳು.

ಒಂದು ಸಾರಿ ದೇವೇಂದ್ರನು ಕೈಲಾಸಕ್ಕೆ ಹೋಗಿ ದ್ವಾರಕ್ಕೆ ಅಡ್ಡವಾಗಿ ನಿಂತಿದ್ದ ರುದ್ರಭಟನೇ ಶಿವನೆಂದು ತಿಳಿಯದೆ ಅವನ ಮೇಲೆ ತನ್ನ ವಜ್ರಾಯುಧವನ್ನು ಝಳಪಿಸಿದನು. ಆಗ ಶಿವನು ನಿಜರೂಪದಿಂದ ಪ್ರತ್ಯಕ್ಷನಾಗಿ ಕೋಪದಿಂದ ತನ್ನ ಮೂರನೇ ಕಣ್ಣನ್ನು ತೆರೆದನು.

ಆಗ ಇಂದ್ರನು ಹೆದರಿ ಶರಣಾಗತನಾಗಿ ರಕ್ಷಿಸುವಂತೆ ಪ್ರಾರ್ಥಿಸಲು, ಶಿವನು ತನ್ನ ಕೋಪಾಗ್ನಿಯನ್ನು ಸಮುದ್ರದೊಳಗೆ ಕಳುಹಿಸಿದನು. ಅದೇ ಸಮಯದಲ್ಲಿ ರಾಧಾದೇವಿಯ ಶಾಪದಿಂದ ಸುದಾಮನು ಗೋಲೋಕದಿಂದ ಆ ಶಿವಾಗ್ನಿಗೆ ಬಿದ್ದು ಸಮುದ್ರದಲ್ಲಿ ಬಿಳಿಯ ಶಂಖವನ್ನು ತಲೆಯಲ್ಲಿ ಧರಿಸಿದ ಬಾಲಕನಾಗಿ ಹುಟ್ಟಿದನು.

ಸುದಾಮನೂ ಕೃಷ್ಣನೂ ಬೇರೆ ಬೇರೆಯಾಗಿರುವವರಲ್ಲ. ಕೃಷ್ಣನು ತನ್ನ ಸಹಚರನಾದ ಸುದಾಮನ ಮೇಲಿನ ಅಭಿಮಾನದಿಂದ ಆ ಬಾಲಕನಿಗೆ ಅಜೇಯವಾದ ಕೃಷ್ಣ ಕವಚವನ್ನು ಪ್ರಸಾದಿಸಿದನು.

ಸಮುದ್ರ ತೀರದಲ್ಲಿ ಪುತ್ರನಿಗಾಗಿ ತಪಸ್ಸು ಮಾಡಿಕೊಂಡಿದ್ದ ದಂಭನೆಂಬೊಬ್ಬ ರಾಕ್ಷಸರಾಜನು ಸಮುದ್ರದಲ್ಲಿ ತೇಲುವ ಬಾಲಕನನ್ನು ನೋಡಿ, ತನಗೆ ಸಮುದ್ರರಾಜನು ಕರುಣಿಸಿದ ಕುಮಾರನೆಂಬ ಭಾವನೆಯಿಂದ ಎತ್ತಿಕೊಂಡನು. ಆ ಬಾಲಕನಿಗೆ ಜಲಂಧರನೆಂದೂ, ಶಂಖಚೂಡನೆಂದೂ ಹೆಸರು ಬಂತು.

ತುಲಸೀದೇವಿ ವಿಷ್ಣುವನ್ನೇ ತನ್ನ ಗಂಡನೆಂದು ಭಾವಿಸುತ್ತ, ವಿಷ್ಣುವನ್ನು ಆರಾಧಿಸಿಕೊಂಡು ತಪಸ್ಸು ಮಾಡುತ್ತಿರುವಾಗ ಜಲಂಧರನು ಅವಳನ್ನೊಮ್ಮೆ ನೋಡಿದನು.

ಆಮೇಲೆ ಅವಳನ್ನೇ ಮದುವೆಯಾಗುವ ಆಶೆಯಿಂದ, ಜಲಂಧರನು ತುಲಸಿಯನ್ನು ತನಗೆ ಕೊಟ್ಟು ವಿವಾಹಮಾಡಬೇಕೆಂದು ಕೇಳಿದನು.

ಧರ್ಮಧ್ವಜನು ಒಪ್ಪಿದನು. ತುಲಸಿಯೊಂದಿಗೆ ಜಲಂಧರನಿಗೆ ವಿವಾಹವಾಯಿತು. ತುಲಸಿ ಜಲಂಧರನೇ ತನ್ನ ದೇವರೆಂದು ಎಣಿಸಿ, ವಿಷ್ಣುವೇ ಆ ರೂಪದಲ್ಲಿ ತನ್ನನ್ನು ವರಿಸಿದನೆಂದು ಭಾವಿಸಿ ಪತಿವ್ರತೆಯಾಗಿ ನಡೆದುಕೊಳ್ಳುತ್ತಿದ್ದಳು.

ಜಲಂಧರನು ಅಂತಹ ಪತ್ನಿಗೆ ತಕ್ಕ ಪತಿಯಾಗಿ ಇರಲಾಗದೆ, ರಾಕ್ಷಸ ಬಲವನ್ನು ಸೇರಿಸಿಕೊಂಡು ದೇಶ ದೇಶಗಳಲ್ಲಿ ವಿಜೃಂಭಿಸುತ್ತ, ಭಯಂಕರನಾಗಿ ಮೂರು ಲೋಕಗಳನ್ನೂ ಜಯಿಸಿದನು. ಮುಖ್ಯವಾಗಿ ತುಲಸೀದೇವಿಯ ಪಾತಿವ್ರತ್ಯ ಮಹಿಮೆಯಿಂದ

ಅವನಿಗೆ ಎಲ್ಲಿಗೆ ಹೋದರೂ ಒಂದಿಷ್ಟೂ ಹಾನಿಯಾಗುತ್ತಿದ್ದಿಲ್ಲ. ಜಯವೇ ಲಭಿಸುತ್ತಿದ್ದಿತು.

ತುಲಸಿಯ ಸೌಂದರ್ಯಕ್ಕೆ ಮುಗ್ಧನಾಗಿ ಜಲಂಧರನು ಅವಳನ್ನು ವಿವಾಹವಾದನೇ ಹೊರತು, ಅವನಿಗೆ ತುಲಸಿಯಲ್ಲಿ ಸ್ವಾರಸ್ಯ ತಗ್ಗಿತು. ಅವನ ರಾಕ್ಷಸತನಕ್ಕೂ ತುಲಸಿಯ ಸಾತ್ವಿಕತನಕ್ಕೂ ಮದುವೆಯಲ್ಲಿಯೇ ಕೂಡಿಬರಲಿಲ್ಲ. ಅವನಿಗೆ ತುಲಸಿಯಲ್ಲಿ ಯಾವ ಸ್ವಾರಸ್ಯವೂ ಕಾಣಲಿಲ್ಲ. ಹಸೆಮಣೆಯ ಮೇಲಿಂದ ಎದ್ದಮೇಲೆ ಅವನು ಅವಳನ್ನು ನೋಡುವುದನ್ನೇ ಬಿಟ್ಟನು.

ತುಲಸಿ ಸದಾ ಗಂಡನನ್ನೇ ನೆನೆದುಕೊಂಡು ಪೀಠದಲ್ಲಿ ಮೂಡಿದ್ದ ಅವನ ಅಡಿ ಜಾಡುಗಳನ್ನೇ ಆರಾಧಿಸಿಕೊಂಡಿದ್ದಳು.

ಜಲಂಧರನು ಕೃಷ್ಣ ಕವಚ ಪ್ರಭಾವದಿಂದ ಅಜೇಯನಾಗಿ ಮೂರು ಲೋಕಗಳನ್ನೂ ಜಯಿಸಿ ರಾಕ್ಷಸ ಸಾಮ್ರಾಟನಾದನು.

ಹಾಗಿರುವಾಗ ಕಲಹಭೋಜನನಾದ ನಾರದನು ಪಾರ್ವತಿ ದೇವಿಯ ಸೌಂದರ್ಯವನ್ನು ಕುರಿತು ಜಲಂಧರನ ಮುಂದೆ ಬಹಳವಾಗಿ ವರ್ಣಿಸಿದನು. ಅದರಿಂದ ಮೋಹಿತನಾದ ಜಲಂಧರನು ಕೈಲಾಸದ ಮೇಲಕ್ಕೆ ದಾಳಿಮಾಡಿ ಪಾರ್ವತಿಯನ್ನು ತನಗೆ ಕೊಡಬೇಕೆಂದೂ, ತಪ್ಪಿದರೆ ಯುದ್ಧ ಮಾಡಿ ಅವಳನ್ನು ಒಯ್ಯುವೆನೆಂದೂ ಶಿವನನ್ನು ಕೆಣಕಿದನು. ಶಿವನು ಅವನ ಮೇಲೆ ಬೀಸಿದ ತ್ರಿಶೂಲವು ಜಲಂಧರನ ಎದೆಗೆ ತಾಗಿ ಖಂಗನೆ ಕೆಳಗೆ ಬಿದ್ದಿತು.

ಪಾರ್ವತಿ ಹೆದರಿ ಓಡಿಹೋಗಿ ರಾಧಾದೇವಿಯನ್ನು ಮೊರೆಹೊಕ್ಕಳು.

ಆಗ ರಾಧೆ ಪಾರ್ವತಿಯೊಂದಿಗೆ "ಜಲಂಧರನು ಶಿವನ ನೇತ್ರಾಗ್ನಿಯಿಂದಲೇ ಹುಟ್ಟಿದ್ದಾನೆ. ಆ ಶಿವನಿಂದಲೇ ಅವನ ಸಂಹಾರವಾಗಬೇಕಾಗಿದೆ. ಆದರೆ ಅವನ ಶರೀರದಲ್ಲಿರುವ ಕೃಷ್ಣಕವಚದಿಂದಾಗಿ ಯಾವ



ಆಯುಧವೂ ಅವನನ್ನು ಏನೂ ಮಾಡಲಾರದು. ತುಲಸೀದೇವಿಯ ಪಾತಿವ್ರತ್ಯ ಮಹಿಮೆಯಿಂದ ಅವನಿಗೆ ಪ್ರಾಣಭಯವೂ ಇಲ್ಲ. ಆದರೆ ವಿಷ್ಣು ಮಾಯೆಗೆ ಅತೀತವಾದುದು ಯಾವುದೂ ಇಲ್ಲ. ನೀನು ವಿಷ್ಣುವನ್ನು ಪ್ರಾರ್ಥಿಸು. ಅವನೇ ಏನಾದರೂ ಪರಿಹಾರ ತೋರಿಸುವನು" ಎಂದು ಹೇಳಿದಳು.

ಅದರಂತೆ ಪಾರ್ವತಿ ವಿಷ್ಣುವನ್ನು ಪ್ರಾರ್ಥಿಸಿದಳು. ವಿಷ್ಣು ವೃದ್ಧ ಬ್ರಾಹ್ಮಣನ ರೂಪದಲ್ಲಿ ಹಿಮಾಚಲ ಪ್ರದೇಶಕ್ಕೆ ಹೋಗಿ, ಯುದ್ಧವಿಲ್ಲದ ಸಮಯ ನೋಡಿ, ಜಲಂಧರನ ಮುಂದೆ ಗಡಗಡ ನಡುಗುತ್ತ, ಅವನನ್ನು ಅನೇಕ ವಿಧದಲ್ಲಿ ಹೊಗಳುತ್ತ, "ವೀರಾಧಿವೀರನಾದ ನಿನಗೆ ಬೇರೊಂದು ಕವಚವೇತಕ್ಕೆ? ಚಳಿಜ್ವರದಿಂದ ಸಾಯುವ ನನಗೆ ಅದನ್ನು ಕೊಟ್ಟು ಸ್ವಲ್ಪ ಕಾಲದವರೆಗೆ ನನ್ನನ್ನು ಬದುಕಿಸಪ್ಪಾ," ಎಂದು ಪ್ರಾರ್ಥಿಸಿದನು.



ಜಲಂಧರನು ದರ್ಪದಿಂದ, "ಹೌದೌದು. ನನಗೇಕೆ ಕೃಷ್ಣಕವಚ ? ತೆಗೆದುಕೋ" ಎಂದು ತನ್ನ ಕವಚವನ್ನು ವೃದ್ಧ ಬ್ರಾಹ್ಮಣನಿಗೆ ದಾನ ಮಾಡಿದನು.

ತರುವಾಯ ವಿಷ್ಣು ಜಲಂಧರನ ರೂಪವನ್ನು ತಾಳಿ ತುಲಸೀದೇವಿಯ ಮಂದಿರದೊಳಗೆ ಹೋದನು. ಆ ಸಮಯದಲ್ಲಿ ಕೈಲಾಸದ ಹಿಮಾಚಲ ಪ್ರದೇಶದಲ್ಲಿ ಶಿವನಿಗೂ ಜಲಂಧರನಿಗೂ ಯುದ್ಧವು ನಡೆಯುತ್ತಾ ಇದ್ದಿತು.

ಹಿಂದೆ ಒಂದಾನೊಂದು ಕಾಲದಲ್ಲಿ ಗಂಡಕಿ ಎಂಬ ದೇವಕನ್ಯೆ ಭೂಲೋಕಕ್ಕೆ ಬಂದು ವಿಷ್ಣುವನ್ನು ಕುರಿತು ದೊಡ್ಡ ತಪಸ್ಸನ್ನು ಮಾಡಿದಳು. ವಿಷ್ಣು ಅವಳಿಗೆ ಮೆಚ್ಚಿ ಏನು ವರ ಬೇಕೆಂದು ಕೇಳಿದನು. "ದೇವಾ ! ನಿನ್ನನ್ನು ನನ್ನೊಳಗೇ ತುಂಬಿಸಿಕೊಂಡು ರತ್ನನಿಧಿಯನ್ನು ಕಾಪಾಡಿಕೊಳ್ಳುವ ಹಾಗೆ ಮಾಡಿಕೊಳ್ಳಬೇಕೆಂದಿದ್ದೇನೆ. ಬೇರೆ ಯಾವ ಕೋರಿಕೆಯೂ ನನಗಿಲ್ಲ" ಎಂದಳು ಗಂಡಕಿ.

"ಸರಿ. ನೀನು ಗಂಡಕಿ ನದಿಯಾಗಿ ಪ್ರವಹಿಸಿಕೊಂಡಿರು. ನಿನ್ನ ನೀರಿನೊಳಗೆ ನಾನು ಸಾಲಗ್ರಾಮವಾಗಿ ಇರುತ್ತೇನೆ" ಎಂದು ಹೇಳಿದನು. ಅದರಂತೆ ಗಂಡಕೀದೇವಿ ನದಿಯಾಗಿ ಬದಲಾಯಿಸಿದಳು.

ತುಲಸೀದೇವಿ ವಿಷ್ಣುವಿನ ಮಾಯಾ ಪ್ರಭಾವಕ್ಕೆ ಒಳಗಾಗಿ ತನ್ನ ಗಂಡನು ಇಷ್ಟು ಕಾಲದ ಮೇಲೆ ತನ್ನ ಬಳಿಗೆ ಬಂದುದನ್ನು ನೋಡಿ ಭ್ರಮೆಗೆ ಬಿದ್ದು ಆತ್ಮಾನಂದದಿಂದ ಪತಿಯ ರೂಪದಲ್ಲಿದ್ದ ವಿಷ್ಣುವಿನ ಪಾದಗಳಿಗೆ ನಮಸ್ಕಾರ ಮಾಡಿದಳು. ಅದೇ ಸಮಯದಲ್ಲಿ ಶಿವನು ಜಲಂಧರನ ಕಂಠವನ್ನು ತ್ರಿಶೂಲದಿಂದ ಛೇದಿಸಿಬಿಟ್ಟನು. ಆ ಶಿರಸ್ಸು ಹಾರಿ ಬಂದು ತುಲಸೀದೇವಿಯ ಕೈಗಳಿಗೆ ತಾಗಿ ನೆಲಕ್ಕೆ ಹೊರಳಿ ಬಿದ್ದಿತು.

ತುಲಸಿ ಗಾಬರಿಯಾಗಿ ಗಂಡನ ತಲೆಯನ್ನು ನೋಡಿ, ಭ್ರಮೆಯಿಂದ ಬಿಡುಗಡೆ ಹೊಂದಿ, "ಓ ಕಳ್ಳ ವಿಷ್ಣೂ ! ನನ್ನನ್ನು ಮೋಸಪಡಿಸಿದ ನೀನು ಕಲ್ಲಾಗಿ ಹೋಗು !" ಎಂದು ಶಪಿಸಿದಳು.

ವಿಷ್ಣು ಮುಗುಳುನಗು ಮಿನುಗಿಸುತ್ತ, "ತುಲಸೀ ಸತೀ ! ಸಂತೋಷದಿಂದ ನಿನ್ನ ಶಾಪವನ್ನು ಶಿರಸಾ ವಹಿಸಿಕೊಳ್ಳುತ್ತೇನೆ. ನಿನ್ನ ಗಂಡನಾದ ಜಲಂಧರನನ್ನು ಯಾರೆಂದು ತಿಳಿದೆ ? ಸುದಾಮನೇ ! ನಾನೇ ಕೃಷ್ಣ ಸುದಾಮರ ರೂಪಗಳಲ್ಲಿ ಗೋಲೋಕದಲ್ಲಿರುವವನು ! ನಾನು ಬೇರೆ ನಿನ್ನ ಗಂಡ ಬೇರೆ ಎಂದು ತಿಳಿಯಬೇಡ !" ಎಂದನು.

ತುಲಸಿ ಆಶ್ಚರ್ಯದಿಂದ ನೋಡುತ್ತಿರಲು, "ಹೌದು ತುಲಸೀ ! ಮದುವೆಗೆ ಮೊದಲು ನೀನು ನನ್ನನ್ನು ಪತಿಯಾಗಬೇಕೆಂದು ಕೋರಿ ಆರಾಧಿಸಿದವಳು ತಾನೇ ? ವಿವಾಹ ನಡೆದ ಮೇಲೆ ವ್ಯವಹಾರ ಧರ್ಮವನ್ನನುಸರಿಸಿ, ಸತೀಲೋಕಕ್ಕೆ ಆದರ್ಶಪ್ರಾಯಳಾಗಿ ಪರಮ ಸಾಧ್ವಿಯಾದ ಸತೀ ತುಲಸೀ ದೇವಿಯಾಗಿದ್ದವಳು ನೀನು. ನೀನು ಪತಿವ್ರತೆಯ ಚಿಹ್ನೆ



ಯಾಗಿ ತುಲಸಿ ಗಿಡದ ರೂಪದಲ್ಲಿ ಭೂಮಿಯಲ್ಲಿರು. ತುಲಸಿ ನನಗೆ ಅತ್ಯಂತ ಪ್ರೀತಿಪಾತ್ರವಾಗಿರುತ್ತದೆ. ತುಲಸಿಯ ಸನ್ನಿಧಿಯಲ್ಲಿ ನಾನು ಯಾವಾಗಲೂ ಶಿಲಾ ರೂಪದಲ್ಲಿರುತ್ತೇನೆ" ಎಂದು ಹೇಳಿದನು.

ವಿಷ್ಣು ಗಂಡಕೀ ನದಿಯಲ್ಲಿ ಸಾಲಗ್ರಾಮ ಶಿಲೆಗಳ ರೂಪದಲ್ಲಿ ಅವತರಿಸಿ ಮುಳುಗಿರತೊಡಗಿದನು. ತುಲಸೀದೇವಿ ಪತಿಯ ಶಿರಸ್ಸಿನ ಜೊತೆ ಸಹಗಮನ ಮಾಡಿದ ಮೇಲೆ ತುಲಸೀ ಗಿಡವಾಗಿ ಮೊಳೆತಳು.

ಗಂಡಕೀ ನದಿಯಲ್ಲಿ ಅಪರೂಪವಾಗಿ ದೊರಕುವ ಸಾಲಗ್ರಾಮ ಶಿಲೆಗಳನ್ನು ತುಲಸೀ ಗಿಡದ ಬುಡದಲ್ಲಿಟ್ಟು ಪೂಜೆ ಮಾಡುವ ಪದ್ಧತಿ ಏರ್ಪಟ್ಟಿತು. ತುಲಸಿ ದಳಗಳು ಸಾಲಗ್ರಾಮ ಶಿಲೆಗಳ ಮೇಲೆ ಬಿದ್ದು ಅಲಂಕರಿಸುತ್ತಿದ್ದುವು. ವಿಷ್ಣುವಿಗೆ ತುಲಸೀ ಮಣಿಯ ಮಾಲೆಗಳೆಂದರೆ ಬಹಳ ಪ್ರೀತಿ.

ಹೀಗಿರುವಾಗ ಒಮ್ಮೆ ಮಹರ್ಷಿಗಳೆಲ್ಲಾ ಸಭೆ ಸೇರಿ, "ತ್ರಿಮೂರ್ತಿಗಳಲ್ಲಿ ಯಾರು ಹೆಚ್ಚಿನವರು ?" ಎಂಬ ಪ್ರಶ್ನೆಯನ್ನು ತಮ್ಮೊಳಗೆ ನಿರ್ಣಯಿಸಲು ಸಾಧ್ಯವಾಗದೆ, ಅದನ್ನು ಪರೀಕ್ಷಿಸಲು ಭೃಗು ಮಹರ್ಷಿಯನ್ನು ಕಳುಹಿಸಿದರು.

ಭೃಗು ಮೊದಲು ಸತ್ಯಲೋಕದಲ್ಲಿರುವ ಬ್ರಹ್ಮನ ಬಳಿಗೆ ಹೋದನು. ಅಲ್ಲಿ ಬ್ರಹ್ಮನು ಸರಸ್ವತಿಯ ವೀಣಾಗಾನದಲ್ಲಿ ಮೈಮರೆತು ಮುಳುಗಿ ತೇಲಾಡುತ್ತಿದ್ದನೇ ಹೊರತು, ಭೃಗು ಮಹರ್ಷಿಯನ್ನು ನೋಡಲೇ ಇಲ್ಲ.

ಅಲ್ಲಿಂದ ಭೃಗು ಕೈಲಾಸಕ್ಕೆ ಹೋಗಿ ಪಾರ್ವತಿಯೊಂದಿಗೆ ಸದಾ ನೃತ್ಯದಲ್ಲೇ ಮಗ್ನನಾಗಿದ್ದ ಶಿವನನ್ನು ನೋಡಿ, ಶಿವನ ಅನಾದರಣೆಯಿಂದ ಕೋಪಿಸಿಕೊಂಡು ಹಿಂದಿರುಗಿ, ವೈಕುಂಠಕ್ಕೆ ಹೋದನು.

ತ್ರಿಮೂರ್ತಿಗಳಲ್ಲಿ ಇಬ್ಬರ ಅನಾದರಣೆಯಿಂದ ಕೋಪದಲ್ಲಿದ್ದ ಭೃಗುವಿನ ಪಾದದಲ್ಲಿ ಅಹಂಕಾರದ ಕಣ್ಣು ಮೂಡಿದ್ದಿತು. ವೈಕುಂಠದಲ್ಲಿ ಲಕ್ಷ್ಮೀ ಸಮೇತವಾಗಿ ಶೇಷತಲ್ಪದಲ್ಲಿ ಮಲಗಿದ್ದ ವಿಷ್ಣುವಿನ ವಕ್ಷಸ್ಥಲದ ಮೇಲೆ ಭೃಗು ಪಾದದಿಂದ ಒದ್ದು ಎಬ್ಬಿಸಿದನು.

ವಿಷ್ಣುಮೂರ್ತಿ ಧಿಗ್ಗನೆದ್ದು ಭೃಗುವಿನ ಪಾದವನ್ನು ತನ್ನ ತಲೆಯ ಮೇಲೆ ಇಟ್ಟುಕೊಂಡು, "ಮಹರ್ಷಿ ಪ್ರವರನೇ ! ನಿನ್ನ ಮೃದು ಪಾದಾರವಿಂದವು ನನ್ನ ಕಠಿಣವಾದ ವಕ್ಷವನ್ನು ತಾಗಿ ಎಷ್ಟು ನೊಂದಿತೋ !" ಎಂದು ಪಾದವನ್ನು ಒತ್ತುತ್ತ, ಪಾದದಡಿಯಲ್ಲಿದ್ದ ಗರ್ವದ ಕಣ್ಣನ್ನು ಹೊಸಕಿ ಹಾಕಿದನು. ಅದರಿಂದ ಭೃಗುವಿನ ಗರ್ವವು ಪೂರ್ತಿ ಹೋಯಿತು.

ಭೃಗು ವಿಷ್ಣುವನ್ನು ಸ್ತೋತ್ರ ಮಾಡುತ್ತಾ, ಋಷಿಗಳ ಮುಂದೆ ಹೋಗಿ ವಿಷ್ಣುವಿನ ದೊಡ್ಡತನವನ್ನು ವಿವರಿಸಿ ಹೇಳಿದನು.

ಆದರೆ ವೈಕುಂಠದಲ್ಲಿ ಲಕ್ಷ್ಮಿಗೆ ಬಹಳ ಕೋಪ ಬಂದಿತ್ತು. ವಿಷ್ಣುವಿನ ವಕ್ಷಸ್ಥಲದ ಮೇಲೆ ತಾನು



ಒರಗಿಕೊಂಡಿರುವಾಗ ಭೃಗುಮುನಿ ಬಂದು ಒದ್ದುದರಿಂದ ಲಕ್ಷ್ಮೀದೇವಿಗೆ ದೊಡ್ಡ ಅವಮಾನವಾಗಿ ಹೋಯಿತು. ಪವಿತ್ರವಾದ ವಿಷ್ಣು ವಕ್ಷಸ್ಥಲವು ಮುನಿಯ ಪಾದಸ್ಪರ್ಶದಿಂದ ಅಪವಿತ್ರವಾಯಿತೆಂದು ಅವಳಿಗೆ ತೋರಿತು. ಇನ್ನು ತಾನು ವಿಷ್ಣುವಿನೊಂದಿಗೆ ಇರಲಾರೆನೆಂದು ಹೇಳಿ, ಭೂಲೋಕಕ್ಕೆ ಇಳಿದು ತಪಸ್ವಿನಿಯಾಗಿ ಇರತೊಡಗಿದಳು ಲಕ್ಷ್ಮಿ.

ವಿಷ್ಣು ಲಕ್ಷ್ಮಿಯನ್ನು ಹುಡುಕುತ್ತಾ, ಮಾನವ ರೂಪ ತಾಳಿ ಭೂಮಿಯ ಅರಣ್ಯಗಳಲ್ಲಿ ಹುಡುಕುತ್ತ ವಕುಳಾವತಿಯ ಆಶ್ರಮವನ್ನು ಸೇರಿಕೊಂಡನು. ಆ ವಕುಳಾವತಿ ಕೃಷ್ಣಾವತಾರದ ಕಾಲದಲ್ಲಿ ಯಶೋದೆಯಾಗಿದ್ದವಳೇ.

ಗೋಕುಲದಲ್ಲಿರುವಾಗ ಯಶೋದೆ ಒಮ್ಮೆ ಕೃಷ್ಣನೊಂದಿಗೆ, "ಕೃಷ್ಣಾ, ತಾಯಿಯಾದವಳಿಗೆ ಕುಮಾರನ ಮದುವೆ ನೋಡಬೇಕೆಂಬ ಆಸೆ ಎಷ್ಟರಮಟ್ಟಿಗಿದೆಯೆಂದು ಊಹಿಸಲೂ ಸಾಧ್ಯವಿಲ್ಲ. ಆ ಕೋರಿಕೆ ನನಗೆ ತೀರಲೇ ಇಲ್ಲ" ಎಂದಿದ್ದಳು. ಅದಕ್ಕೆ ಕೃಷ್ಣನು, "ಅಮ್ಮಾ, ಮುಂದಿನ ಜನ್ಮದಲ್ಲಿ ನಿನ್ನ ಕೋರಿಕೆ ಖಂಡಿತವಾಗಿಯೂ ತೀರುತ್ತದೆ" ಎಂದು ಮಾತು ಕೊಟ್ಟಿದ್ದನು.

ಹಾಗಿರುವಾಗ ಒಂದು ದಿನ ಆಕಾಶ ರಾಜನ ಮಗಳು ಪದ್ಮಾವತೀ ದೇವಿ ವನವಿಹಾರ ಮಾಡುತ್ತಾ ವಕುಳಾಶ್ರಮದ ಹತ್ತಿರ ಬಂದಳು. ಆಗ ಒಂದು ಮದ್ದಾನೆ ಘೀಂಕರಿಸಿಕೊಂಡು ಅವಳ ಕಡೆಗೆ ಬಂದಿತು. ಅವಳ ಗೆಳತಿಯರೆಲ್ಲಾ ಹೆದರಿ ಚೆಲ್ಲಾಚೆದರಾಗಿ ಓಡಿದರು. ಹೆದರಿ ನಡುಗುತ್ತಿದ್ದ ಪದ್ಮಾವತಿಯು ಶ್ರೀನಿವಾಸನ ಹತ್ತಿರವೇ ಬಿದ್ದು ಮೂರ್ಛೆ ಹೋದಳು.

ಶ್ರೀನಿವಾಸನು ಮದ್ದಾನೆಯ ಮುಂದೆ ಅಡ್ಡನಿಂತು ಕೈಎತ್ತಿದ ಕೂಡಲೇ ಮದ್ದಾನೆ ಮದವಿಳಿದು ತಟಸ್ಥವಾಗಿ ಸೊಂಡಿಲೆತ್ತಿ ಶ್ರೀನಿವಾಸನಿಗೆ ನಮಸ್ಕಾರ ಮಾಡಿತು. ಶ್ರೀನಿವಾಸನು ಪದ್ಮಾವತಿಯ ಕೈಹಿಡಿದು ಎಬ್ಬಿಸಿ ನಿಲ್ಲಿಸಿದನು. ಗೆಳತಿಯರು ಬಂದ ಮೇಲೆ ಪದ್ಮಾವತಿ ಹೊರಟುಹೋದಳು.

ಆಗ ಪದ್ಮಾವತೀ ಶ್ರೀನಿವಾಸರಿಗೆ, ಒಬ್ಬರ ಮೇಲೊಬ್ಬರಿಗೆ ಅನುರಾಗವೇರ್ಪಟ್ಟಿತು. ಪೂರ್ವ ಜನ್ಮದಲ್ಲಿ ಪದ್ಮಾವತಿ ವಿಷ್ಣುವೇ ತನ್ನ ಪತಿಯಾಗಬೇಕೆಂದು ತಪಸ್ಸು ಮಾಡಿಕೊಂಡಿದ್ದ ವೇದವತಿಯಾಗಿದ್ದವಳು. ರಾವಣನು ಅವಳನ್ನು ಮುಟ್ಟಿದ ಕಾರಣದಿಂದ ಯೋಗಾಗ್ನಿಯನ್ನು ಹುಟ್ಟಿಸಿ ದಹಿಸಿಕೊಂಡವಳು. ಈಗ ಆಕಾಶ ರಾಜಕುಮಾರಿಯಾಗಿ ಹುಟ್ಟಿದ್ದಳು.

ಶ್ರೀನಿವಾಸನು ಪದ್ಮಾವತಿಯ ಮೇಲೆ ಅನುರಾಗ ತಾಳಿರುವನೆಂದು ತಿಳಿದು ಮದುವೆ ನಿಶ್ಚಯ ಮಾಡಲು ವಕುಳಾದೇವಿ ಸಪ್ತರ್ಷಿಗಳನ್ನು ತನ್ನೊಂದಿಗೆ ಕರೆದುಕೊಂಡು ಆಕಾಶರಾಜನ ಭವನಕ್ಕೆ ಹೋದಳು. ಅದಕ್ಕಿಂತ ಮೊದಲು ಶ್ರೀನಿವಾಸನು ಕೊರ

ವಂಜಿಯ ವೇಷದಲ್ಲಿ ಅಲ್ಲಿಗೆ ಹೋಗಿ, ಪದ್ಮಾವತಿ ಬಯಸಿದವನೇ ಆವಳನ್ನು ಕೇಳಲು ತಾಯಿಯನ್ನು ಕಳುಹಿಸುವನೆಂದು ಭವಿಷ್ಯ ಹೇಳಿದನು.

ಆಮೇಲೆ ವಕುಳಾ ದೇವಿಯ ಮೂಲಕ ಮದುವೆ ನಿಶ್ಚಯವಾಯಿತು. ಕುಬೇರನು ಶ್ರೀನಿವಾಸನಿಗೆ ಬೇಕಾದ ಧನವನ್ನು ಕೊಟ್ಟನು. ಬಹು ವೈಭವ ದಿಂದ ಮದುವೆಯಾಯಿತು. ಶ್ರೀನಿವಾಸನು ಪದ್ಮಾ ವತಿಯನ್ನು ಕರೆದುಕೊಂಡು ತನ್ನ ಆಶ್ರಮಕ್ಕೆ ಹಿಂದಿರುಗಿದನು.

ನಾರದನು ಈ ಶುಭ ವಾರ್ತೆಯನ್ನು ತಪಸ್ಸಿನಲ್ಲಿ ರುವ ಲಕ್ಷ್ಮಿಯೊಂದಿಗೆ ಹೇಳಿದನು. ಅದನ್ನು ಕೇಳಿ ಲಕ್ಷ್ಮಿದೇವಿ ಕೋಪಾವೇಶದಿಂದ ಶ್ರೀನಿವಾಸನಿರು ವಲ್ಲಿಗೆ ಹೊರಟುಬಂದಳು.

ಅಷ್ಟು ದೂರದಲ್ಲಿ ಬರುವ ಲಕ್ಷ್ಮಿಯನ್ನು ನೋಡಿ, ಶ್ರೀನಿವಾಸನು ಪದ್ಮಾವತಿಯನ್ನು ಹಿಂದೆ ಬಿಟ್ಟು ಬೇಗಬೇಗನೇ ಏಳು ಶಿಖರಗಳಾಗಿದ್ದ ಶೇಷಾ ಚಲವನ್ನು ಅಧಿಗಮಿಸಿ ಶಿಖರಾಗ್ರದ ಮೇಲೆ ನಿಂತು ಲಕ್ಷ್ಮಿಯನ್ನು ಸ್ವಾಗತಿಸಿದನು.

ಲಕ್ಷ್ಮಿ ಬಂದ ಕೂಡಲೇ ಶ್ರೀನಿವಾಸನು ಆವಳ ಸುಡುನೋಟಕ್ಕೆ ಬದಲಾಗಿ ಮಂದಹಾಸ ಬೀರುತ್ತ ಕಪ್ಪಗಿನ ಶಿಲಾ ವಿಗ್ರಹವಾಗಿ ಬದಲಾವಣೆ ಹೊಂದಿ ದನು. ಆ ವಿಗ್ರಹ ತುಂಬಾ ತುಲಸೀ ಮಾಲೆ ಗಳಿಂದ ದಿವ್ಯ ಕಳೆಗಳಿಂದ ಬೆಳಗಿ ಶೋಭಿಸುತ್ತಿದ್ದಿತು. ಆ ವಿಗ್ರಹದಲ್ಲಿ ವಿಷ್ಣು ಶಿವಶಕ್ತಿಗಳು ಮೂರೂ ಏಕೀಭವಿಸಿಕೊಂಡಿದ್ದುವು. ಲಕ್ಷ್ಮಿ ಅದರ ವಕ್ಷ ಪ್ರದೇಶದಲ್ಲಿ ಅಂತರ್ಹಿತಳಾದಳು. ಆ ವಿಗ್ರಹವನ್ನು ನೋಡುತ್ತಿದ್ದಂತೆ ಇನ್ನೂ ಅನೇಕ ದಿವ್ಯ ರೂಪಗಳು ಗೋಚರಿಸುತ್ತಿದ್ದುವು.

ಯಾರು ಯಾವ ವಿಧವಾಗಿ ನೆನೆಯುವರೋ ಹಾಗೆಯೇ ಕಾಣಿಸುತ್ತ ಶ್ರೀನಿವಾಸನೆಂದೂ, ವೆಂಕಟ ರಮಣನೆಂದೂ, ವೆಂಕಟೇಶ್ವರನೆಂದೂ ಕರೆಯ ಲ್ಪಡುತ್ತ ಅಲ್ಲಿ ವಿಷ್ಣು ಕಲಿಯುಗ ದೈವವೆನಿಸಿ, ಸಪ್ತಗಿರಿಯನ್ನು ಬೆಳಗಿಸಿಕೊಂಡಿದ್ದನು.

ಆ ಶೇಷಾದ್ರಿಯ ಹತ್ತಿರದಲ್ಲೇ ಪದ್ಮಾವತಿ ಅಲಮೇಲು ಮಂಗಮ್ಮ ಎಂಬ ಹೆಸರಿನಿಂದ ಬೆಳಗಿ ಕೊಂಡಿರುವಳು. ಲಕ್ಷ್ಮಿ ತಪಸ್ಸು ಮಾಡಿದ ಸ್ಥಳ ದಲ್ಲಿ ಕೋಲಾಪುರ ಮಹಾ ಲಕ್ಷ್ಮಿಯಾಗಿ ನೆಲೆಸಿರುವು ದರಿಂದ ಅದು ಲಕ್ಷ್ಮೀ ನಿಲಯವಾಯಿತು.

ನಂಬಿದವರನ್ನು ಆಪದಗಳಿಂದ ಸಂರಕ್ಷಿಸುತ್ತ, ಕರೆದರೆ ಓಗೊಡುವ ದೇವನೆಂದು ಪ್ರಸಿದ್ಧನಾಗಿ, ಕಲಿಯುಗದ ದೇವನೆಂದು ಸಪ್ತಗಿರಿಯಲ್ಲಿ ಮಹಾ ವಿಷ್ಣು ಬೆಳಗುತ್ತಿದ್ದಾನೆ. ಈ ಬಗೆಯ ವಿಷ್ಣುಲೀಲೆ ಯನ್ನು ಕೇಳಿದ ಶೌನಕಾದಿ ಮುನಿಗಳಿಗೆ ಬಹಳ ಸಂತೋಷವಾಯಿತು.





# ವರ್ತಕನ ಪರೀಕ್ಷೆ

**ಒಂದು** ನಗರದಲ್ಲಿದ್ದ ಧನಂಜಯನೆಂಬ ವರ್ತಕನಿಗೆ ಅಗತ್ಯಬಿದ್ದಾಗ ಬೇರೆ ಬೇರೆ ಪಟ್ಟಣಗಳಿಂದ ಸರಕುಗಳನ್ನು ಕೊಂಡುಕೊಂಡು ಬರಲು ಒಬ್ಬ ಆಳನ್ನು ಸಹಾಯಕನಾಗಿ ಇಟ್ಟುಕೊಳ್ಳಬೇಕಾದ ಅಗತ್ಯ ಬಂತು. ಈ ಸಮಾಚಾರವನ್ನು ಮಿತ್ರನಾದ ಒಬ್ಬ ವರ್ತಕನೊಂದಿಗೆ ಹೇಳಿದ್ದನು.

ಆ ಮಿತ್ರ ವರ್ತಕನು ಗಿರಿನಾಥ, ಅಮರನಾಥ ಎಂಬ ಇಬ್ಬರು ಯುವಕರನ್ನು ಧನಂಜಯನ ಬಳಿಗೆ ಕಳುಹಿಸಿಕೊಟ್ಟನು.

ಇಬ್ಬರೂ ಧನಂಜಯನನ್ನು ನೋಡಿ, ಬಂದ ಕೆಲಸವನ್ನು ನಿವೇದಿಸಿಕೊಂಡರು. ಧನಂಜಯನು ಅವರನ್ನು ಚಾವಡಿಯಲ್ಲಿ ಕುಳಿತುಕೊಳ್ಳುವಂತೆ ಹೇಳಿ, ಒಂದು ಗಂಟೆಯವರೆಗೂ ಹೊರಗೆ ಬಾರದೆ, ಒಳಗೆ ಏನೋ ತುರ್ತು ಕೆಲಸದಲ್ಲಿದ್ದನು. ಅಭ್ಯರ್ಥಿಗಳಾಗಿ ಬಂದ ಆಳುಗಳು ಒಂದು ಗಂಟೆಯವರೆಗೂ ಕಾದಿದ್ದು ನೋಡುತ್ತಿರಲು, ಧನಂಜಯನು ಗಡಿಬಿಡಿಯಿಂದ ಹೊರಗೆ ಬಂದು, "ನೀವೇನೂ ಅಪಾರ್ಥ ಮಾಡಿಕೊಂಡು ಬಿಡಬೇಡಿರಪ್ಪಾ, ನಾನೀಗ ತುಂಬ ತುರ್ತಿನಲ್ಲಿದ್ದೇನೆ. ಈಗಲೇ ವೀರೇಂದ್ರಪುರಕ್ಕೆ ಹೋಗಬೇಕಾಗಿದೆ. ಹಿಂದಿರುಗುವಾಗ ರಾತ್ರಿ ಬಹಳ ಹೊತ್ತಾದೀತು. ಆದ್ದರಿಂದ ನೀವಿಬ್ಬರೂ ಈಗ ಹಿಂತಿರುಗಿ ಹೋಗಿ, ನಾಳೆ ಬೆಳಿಗ್ಗೆ ಬನ್ನಿ. ನಿಮ್ಮಿಬ್ಬರಲ್ಲಿ ಒಬ್ಬನನ್ನು ಖಂಡಿತವಾಗಿ ಕೆಲಸಕ್ಕೆ ಇಟ್ಟುಕೊಳ್ಳುತ್ತೇನೆ" ಎಂದನು.

ಹಾಗೆ ಹೇಳುವಾಗ ಧನಂಜಯನು, ತನ್ನೊಂದಿಗೆ ತೆಗೆದುಕೊಂಡು ಹೋಗುವ ಹಣದ ಗಂಟನ್ನು ತನ್ನ ದುಸ್ತಿನೊಳಗೆ ಭದ್ರಪಡಿಸಿಕೊಳ್ಳುತ್ತಿದ್ದನು. ಅದನ್ನು ನೋಡಿ ಗಿರಿನಾಥನು, "ಆಗಲಿ ಸ್ವಾಮಿ, ಈಗ ನೀವು ವೀರೇಂದ್ರಪುರಕ್ಕೆ ಹೋಗುವಿರಷ್ಟೇ! ಅಲ್ಲಿ ಪಕ್ಕಾ ಕಳ್ಳರಿದ್ದಾರೆ. ನಾವು ಹೀಗೆ ಕಣ್ಣು ಮುಚ್ಚಿ ಬಿಡುವುದರೊಳಗೆ ಬಹಳ ಉಪಾಯದಿಂದ ನಮ್ಮ ಹತ್ತಿರವಿದ್ದ ಹಣವನ್ನು ಲಪಟಾಯಿಸುವಷ್ಟು ಹಿಕ್ಮತ್ತಿನ ಕಳ್ಳರು! ಇದುವರೆಗೆ ನನಗೆ ನಾಲ್ಕು ಸಾರಿ ಹಣ ಕಳೆದುಕೊಂಡ ಅನುಭವವಾಗಿದೆ. ನೀವು ಆ ವಿಷಯದಲ್ಲಿ ತುಂಬ ಎಚ್ಚರದಲ್ಲಿರಬೇಕು ಸ್ವಾಮಿ" ಎಂದನು.

"ಹಾಗೇನು? ಅಲ್ಲಿಯ ಸತ್ರಗಳಲ್ಲಿ ನೀರಿನ ವಸತಿ, ಕೋಣೆಯ ಸೌಕರ್ಯ ಊಟಗೀಟ ಎಲ್ಲಾ ಚೆನ್ನಾ

ರಾಂಬಾಬು

ಗಿರುತ್ತೇನು ?" ಎಂದು ಕೇಳಿದನು ಧನಂಜಯ. "ಅಲ್ಲಿ ಸತ್ರಗಳಲ್ಲಿ ಊಟವೇನೂ ಚೆನ್ನಾಗಿರದು. ಆ ಊಟದಿಂದಾಗಿ ನನಗೆ ಪ್ರತಿಸಾರೀ ಅನಾರೋಗ್ಯವಾಯಿತು" ಎಂದನು ಗಿರಿನಾಥ.

ಧನಂಜಯನು ಅಮರನಾಥನನ್ನು ನೋಡಿ, "ನೀನೂ ಆಗಾಗ ವೀರೇಂದ್ರಪುರಕ್ಕೆ ಹೋಗಿರಬೇಕಷ್ಟೆ ? ನಿನ್ನ ಅನುಭವ ಹೇಗಿತ್ತು ?" ಎಂದು ಕೇಳಿದನು.

ಗಿರಿನಾಥನು ಹೇಳಿದುದೆಲ್ಲಾ ನಿಜವೆಂದೇ ಅಮರನಾಥನೂ ಹೇಳಿ, "ಅಲ್ಲಿ ನಾನು ಒಂದು ಸಾರಿ ಹಣ ಕಳೆದುಕೊಂಡಿದ್ದೆ. ಆಮೇಲೆ ತಕ್ಕ ಜಾಗ್ರತೆಯಿಂದಲೇ ಹಣವಿಟ್ಟುಕೊಂಡಿದ್ದುದರಿಂದ ಮತ್ತೆ ಎಂದೂ ಹಣ ಕಳೆದುಕೊಳ್ಳಲಿಲ್ಲ. ನನಗೂ ಸತ್ರದ ಊಟದಿಂದ ಒಮ್ಮೆ ರೋಗ ಬಂತು. ಅದನ್ನು ನೆನಪಿಟ್ಟುಕೊಂಡು ಬುತ್ತಿ ಕಟ್ಟಿಕೊಂಡು ಅಥವಾ ತಕ್ಕ ಔಷಧ ತೆಗೆದುಕೊಂಡು ಹೋಗುತ್ತಿದ್ದೆ. ನೀವೂ ಔಷಧ ಇಟ್ಟುಕೊಳ್ಳುವುದು ಒಳ್ಳೇದು" ಎಂದನು.

ಧನಂಜಯನು ತೃಪ್ತಿಯಿಂದ ತಲೆಯಾಡಿಸಿ, "ಸರಿ, ನಾಳೆಯಿಂದ ನೀನು ಬಂದು ಕೆಲಸಕ್ಕೆ ಸೇರಿಕೋ. ವೀರೇಂದ್ರಪುರಕ್ಕೆ ಹೋಗುವ ಕೆಲಸ ನಾಳೆಯೇ ಇಟ್ಟುಕೊಳ್ಳೋಣ" ಎಂದನು ಅಮರನಾಥನಿಗೆ. ಆಗ ಗಿರಿನಾಥನು ತುಸು ಕೋಪದಿಂದ, "ಇದು ಎಂಥಾ ನ್ಯಾಯ ಸ್ವಾಮೀ ! ನಮ್ಮಿಬ್ಬರನ್ನೂ ನಾಳೆ ಬೆಳಿಗ್ಗೆ ಬರಲಿಕ್ಕೆ ಹೇಳಿ, ಈಗ ಫಕ್ಕನೆ ನಿರ್ಣಯವನ್ನೇ ಹೇಳಿದಿರಲ್ಲಾ ! ಇದೇನೋ ಪಕ್ಷಪಾತದ ಹಾಗೆ ಕಾಣುತ್ತದೆ" ಎಂದನು.

ಧನಂಜಯನು ಕಿರುನಗು ತೋರಿಸಿ, "ನನಗೆ ಬೇಕಾದವನು ಪರ ಊರುಗಳಲ್ಲಿ ಸಹಾಯಕ್ಕೆ ಬೇಕಾದ ಆಳು. ಅವನು ಹೇಗಿರಬೇಕೆಂಬುದನ್ನು ನೀನು ತಿಳಿದಿಲ್ಲವೆಂದಾಯಿತು. ಹೇಳುತ್ತೇನೆ ಕೇಳು. ವೀರೇಂದ್ರಪುರದಲ್ಲಿ ನೀನು ಒಂದು ಸಾರಿಯಲ್ಲ, ನಾಲ್ಕು ಸಾರಿ ಹಣವನ್ನು ಕಳವಿಗೆ ಬಲಿಗೊಟ್ಟೆನೆಂದು ಹೇಳಿದಿ. ಅದರಿಂದ ನೀನು ಎಂತಹ ಜಾಗರೂಕತೆಯವನೆಂದು ಗೊತ್ತಾಗುತ್ತದೆ. ಒಂದು ಸಾರಿ ಅಲ್ಲಿಯ ಸತ್ರದಲ್ಲಿ ಉಂಡು ರೋಗ ಬಂದ ಮೇಲೆ, ವೈದ್ಯರನ್ನು ನೋಡಿ ತಕ್ಕ ಔಷಧವಿಟ್ಟುಕೊಳ್ಳಬೇಕಿತ್ತು. ನೀನು ಹಾಗೆ ಮಾಡದೆ ವೀರೇಂದ್ರಪುರಕ್ಕೆ ಹೋದ ಪ್ರತಿ ಸಾರಿಯೂ ಅನಾರೋಗ್ಯಕ್ಕೆ ಗುರಿಯಾಗಿರುವಿ. ಇದರಿಂದ ನಿನ್ನ ಯೋಗ್ಯತೆಯನ್ನು ತಿಳಿಯಬಹುದಲ್ಲ ?" ಎಂದನು.

ಇದನ್ನು ಕೇಳಿದ ಮೇಲೆ ಗಿರಿನಾಥನಿಗೆ ತನಗಿಂತ ಅಮರನಾಥನೇ ದೂರದೃಷ್ಟಿಯುಳ್ಳವನೆಂದು ಅರ್ಥವಾಯಿತು. ಅದರಿಂದ ಅವನು ಶಾಂತನಾಗಿ, ಧನಂಜಯನಿಗೆ ನಮಸ್ಕರಿಸಿ ಹೊರಟುಹೋದನು.





# ಕಾಲೌಷಧಿ

**ಯಾ**ವುದೋ ಒಂದು ದೇಶದಲ್ಲಿ ಯಾವನೋ ಒಬ್ಬ ರಾಜನೂ ಅವನಿಗೆ ಒಬ್ಬಳು ರಾಣಿಯೂ ಇದ್ದಳು. ರಾಜಕುಟುಂಬದಲ್ಲಿ ಹುಟ್ಟಿದವರೆಲ್ಲ ಬುದ್ಧಿವಂತರಾಗಿರುವರೆಂದು ಹೇಳಲು ಸಾಧ್ಯವಿಲ್ಲವಷ್ಟೆ ? ರಾಜಕುಟುಂಬದಲ್ಲಿ ಹುಟ್ಟಿ ರಾಜನಾದರೂ ಅವನಲ್ಲಿ ಮೂಢತನ ಹೆಚ್ಚಾಗಿತ್ತು. ತನಗೆ ತಕ್ಕವಳನ್ನೇ ಅವನು ಆರಿಸಿಕೊಂಡುದರಿಂದ ಅವನ ರಾಣಿಯೂ ಅವನಿಗಿಂತ ಹೆಚ್ಚಿನ ಮೂಢಳಾಗಿದ್ದಳು.

ಆ ರಾಣಿ ಮೊದಲನೇ ಸಾರಿ ಗರ್ಭವತಿಯಾಗಿ, ಒಂದು ಹೆಣ್ಣು ಮಗುವನ್ನು ಪಡೆದಳು. ಆ ಶಿಶು ಬರಿಮೈ, ಬಕ್ಕತಲೆಯಲ್ಲಿ, ಬಾಯೊಳಗೆ ಹಲ್ಲೇ ಇಲ್ಲದೆ ಇರುವುದನ್ನು ನೋಡಿ ರಾಣಿ ಅಸಹ್ಯಪಡುತ್ತ "ಮಗು ಅಂದರೆ ಸಣ್ಣದಾಗಿರುವುದು ಸರಿಯೇ ! ಇದೆಂಥ ಬೋಳು ಮಗು !" ಎಂದಳು.

"ಅಯ್ಯೋ! ನಮಗೆ ಇಂಥಾ ನಾಲ್ಕಾರು ಕೂದಲಿನ ಬೋಳು ಮಗು ಹುಟ್ಟಿತಲ್ಲ ! ನಾಲ್ಕು ಮಂದಿ ನೋಡಿದರೆ ಎಷ್ಟು ಅವಮಾನ !" ಎಂದನು ರಾಜ.

ಮಂತ್ರಿಗಳು ರಾಜನಿಗೂ ರಾಣಿಗೂ ಸಮಾಧಾನ ಹೇಳುತ್ತ "ಏನೂ ಚಿಂತೆ ಮಾಡಬೇಡಿ ಪ್ರಭುಗಳೇ, ಇದರಲ್ಲಿ ವಿಶೇಷವೇನಿಲ್ಲ. ಹುಟ್ಟಿದಾಗ ಎಲ್ಲಾ ಮಾನವ ಶಿಶುಗಳೂ ಹೀಗೆಯೇ ಇರುತ್ತವೆ" ಎಂದರು

"ಗೊತ್ತು, ನೀವು ಏಕೆ ಹೀಗೆ ಹೇಳುವಿರೆಂದು. ನಮ್ಮ ಕಣ್ಣು ಒರೆಸಲು ಹೀಗೆಲ್ಲಾ ಸುಳ್ಳು ಹೇಳುವಿರಿ. ನಮ್ಮ ದೇಶದಲ್ಲಿರುವ ಎಲ್ಲಾ ವೈದ್ಯರನ್ನೂ ಕರೆಸಿರಿ" ಎಂದನು ರಾಜ.

ಅದರಂತೆ ಅನೇಕ ವೈದ್ಯರು ರಾಜನ ಬಳಿಗೆ ಬಂದರು. ಅವರನ್ನು ನೋಡಿ ರಾಜನು, "ನೋಡಿ, ಈ ಮಗು ನಮಗೆ ಹುಟ್ಟಿದ ಹೆಣ್ಣು ಮಗು, ಇದು ಕೈಕಾಲಾಡಿಸುವ ನರಮಳುವಿನ ಹಾಗೆ ತೀರಾ ಚಿಕ್ಕದಾಗಿದೆ. ತಲೆಯಲ್ಲಿ ಕೂದಲೇ ಇಲ್ಲ. ಬಾಯಿಯೊಳಗೆ ಹಲ್ಲೂ ಕಾಣುವುದಿಲ್ಲ. ತಕ್ಕ ಔಷಧ ಚಿಕಿತ್ಸೆಯಿಂದ ಮಗು ದೊಡ್ಡದಾಗುವಂತೆ, ತಲೆಗೂದಲು ಬರುವಂತೆ ಮಾಡಬೇಕು. ಅದು ನಿಮ್ಮ ಕರ್ತವ್ಯ" ಎಂದನು ರಾಜ.

"ಮಹಾರಾಜಾ ! ಕ್ಷಮಿಸಿರಿ. ಇದು ಸಾಧ್ಯವಾಗುವ ಕೆಲಸವಲ್ಲ" ಎಂದರು ವೈದ್ಯರು.

ರಾಜನು ಕಣ್ಣು ತಿರುಗಿಸುತ್ತ "ಮಹಾರಾಜನ ಆಜ್ಞೆಯನ್ನು ಉಲ್ಲಂಘಿಸುವ ಧೈರ್ಯವೇ ನಿಮಗೆ ?

ದಶಕಗಳಾಚೆಗಿನ ಚಂದಮಾಮ ಕಥೆ



ನಾನು ಹೇಳಿದಂತೆ ಮಾಡಲು ನಿಮ್ಮಿಂದ ಸಾಧ್ಯವಿಲ್ಲದಿದ್ದರೆ ನೀವು ವೈದ್ಯರೇ ಅಲ್ಲವೆಂದು ನಮ್ಮ ದೇಶದಿಂದ ಓಡಿಸಿಬಿಡುತ್ತೇನೆ. ಆದರ ಮೊದಲು ನಿಮ್ಮ ಬೆನ್ನುಗಳಲ್ಲಿ ಬೆತ್ತಗಳ ಗಾಯವನ್ನು ಮಾಡಿಸುತ್ತೇನೆ. ಐದು ನಿಮಿಷ ವ್ಯವಧಿ ಕೊಡುತ್ತೇನೆ" ಎಂದು ಹೇಳಿ ರಾಜನು ಅಲ್ಲಿಂದ ಧಡಧಡನೆ ಆಚೆಗೆ ಹೋದನು.

ಲೆಕ್ಕ ಮಾಡಿದಂತೆ ಐದು ನಿಮಿಷದಲ್ಲಿ ಅವನು ತಿರುಗಿ ಬಂದು, ದೀನತೆಯಲ್ಲಿ ತಲೆ ತಗ್ಗಿಸಿಕೊಂಡು ನಿಂತಿದ್ದ ವೈದ್ಯರೊಡನೆ, "ಏನು ನಿರ್ಣಯ ಮಾಡಿದಿರಿ? ನನ್ನ ಮಗಳನ್ನು ನನ್ನ ಮಗಳ ಹಾಗೆ ಮಾಡುವಿರಾ, ಬೆನ್ನಿಗೆ ಛಡಿ ಏರಿಸಿಕೊಳ್ಳುವಿರಾ?" ಎಂದು ಕೇಳಿದನು.

ವೈದ್ಯರ ಬಾಯಿಯಿಂದ ಮಾತೇ ಹೊರಡಲಿಲ್ಲ.

ರಾಜನು ಭಟರನ್ನು ಕರೆದು, "ಎಲ್ಲಾ ವೈದ್ಯರ ಬೆನ್ನಿನಲ್ಲಿಯೂ ರಕ್ತ ಬರುವ ಹಾಗೆ ತಲಾ ಹತ್ತತ್ತು ಛಡಿ ಕೊಡಿರಿ. ಎಲ್ಲಿಗೆ ಹೋದರೂ ನಮ್ಮ ನೆನಪಿಗೆ ಗಾಯದ ಗುರುತು ಇರಬೇಕು" ಎಂದನು.

ಆಗ ಒಬ್ಬ ವೃದ್ಧ ವೈದ್ಯನು, "ಮಹಾರಾಜಾ, ಅವಸರಪಡಬಾರದು. ನನಗೊಂದು ದಿವ್ಯೌಷಧವು ಗೊತ್ತಿದೆ. ಆದರ ಹೆಸರು ನೆನಪಿಗೆ ಬರಲು ಹತ್ತು ನಿಮಿಷವಾದರೂ ಬೇಕಾದೀತು. ಅದು ಈಗತಾನೇ ನನ್ನ ನೆನಪಿಗೆ ಬಂತು. ಆ ಔಷಧ ಉಪಯೋಗಿಸಿದರೆ ನಿಮ್ಮ ಮಗಳಲ್ಲಿರುವ ಎಲ್ಲಾ ಲೋಪಗಳೂ ಹೋಗಿಬಿಡುತ್ತವೆ. ಬೆಳೆದು ರಾಜಕುಮಾರಿಯಾಗಿ, ದಟ್ಟವಾದ ಕಪ್ಪು ಕಪ್ಪು ತಲೆಗೂದಲನ್ನು ನೀವುತ್ತಾ ನಿಮ್ಮನ್ನು ನೋಡಿ ಸುಂದರವಾದ ಹಲ್ಲುಗಳನ್ನು ತೋರಿಸಿ ನಗುವ ಹಾಗೆ ಆಗುತ್ತಾಳೆ. ನೀವೇ ಆಶ್ಚರ್ಯದಿಂದ ಮೂಗಿಗೆ ಬೆರಳಿಡುವಷ್ಟು ಸುಂದರಿಯಾಗಿರುತ್ತಾಳೆ" ಎಂದನು.

"ಒಳ್ಳೆಯದು. ಎಲ್ಲಿ ಆ ದಿವ್ಯೌಷಧಿ?" ಎಂದನು ರಾಜ.

"ಹೆಸರು ನೆನಪಿಗೆ ಬಂತು ಎಂದೆನಲ್ಲ? ಕಾಲೌಷಧಿ. ಕಾಲಗರ್ಭದಲ್ಲಿ ಅಡಗಿರುವ ಹನ್ನೆರಡು ಬಗೆಯ ಮುಖ್ಯ ಮೂಲಿಕೆಗಳು ಸೇರಿದ್ದು ಕಾಲೌಷಧಿ. ಆ ಔಷಧದ ಪೂರ್ತಿ ಚಿಕಿತ್ಸೆಗೆ ಸ್ವಲ್ಪ ಕಾಲಾವಧಿಯೂ ಬೇಕು" ಎಂದನು ವೃದ್ಧ ವೈದ್ಯ.

"ಮಹಾರಾಜನ ಅಪ್ಪಣೆಯಾದರೆ ಎಂಥ ಮೂಲಿಕೆಯಾದರೂ ಕೂಡಲೆ ಬರಬೇಕು. ಹಾಗೆ ತರಲು ಸಾಧ್ಯವಾಗದ ಭಟನ ತಲೆ ಹಾರಿಸಿಬಿಡುತ್ತೇನೆ. ಕೂಡಲೇ ಮೂಲಿಕೆಗಳ ಹೆಸರಿನ ಪಟ್ಟಿ ಬರೆದು ಕೊಡಿರಿ. ಏಕೆ ಈಗಲೇ ಬರುವುದಿಲ್ಲ ನೋಡುತ್ತೇನೆ" ಎಂದನು ರಾಜ.

"ಅದು ನಾನ್ನೂರ ಅರವತ್ತೈದು ಬಗೆಯ ಉಪಮೂಲಿಕೆಗಳು, ಮುನ್ನೂರರುವತ್ತೈದು ಬಗೆಯ ಧಾತುಗಳು ಆಗುತ್ತವೆ. ಕೆಲವು ಒಂದೊಂದು ಋತುಗಳಲ್ಲಿ ಮಾತ್ರವೇ ಸಿಗುವಂಥವು. ಕೆಲವು ಧಾತುಗಳನ್ನು

ಹಿಮಗಿರಿಯ ಹಿಮಗಳ ನಡುವಿನಿಂದ ತೆಗೆಯಬೇಕು, ಅದು ನಿಮ್ಮ ಭಟರಿಂದಾಗದು. ಮಂತ್ರದ ಮೂಲಕ ದೇವತೆಗಳನ್ನು ಅವಾಹಿಸಿ ನಾವೇ ತಂದುಕೊಳ್ಳಬೇಕಾಗಿದೆ. ಅದು ಆರು ವರುಷಗಳಿಗೊಮ್ಮೆ ಸಿಗುವಂಥಾದ್ದು. ಎರಡು ಸಾರಿ ತರಿಸಿಕೊಳ್ಳಬೇಕಾಗುತ್ತದೆ ಪ್ರಭೂ" ಎಂದನು ವೃದ್ಧ ವೈದ್ಯ.

"ಮಹಾರಾಜನು ಹೇಳುತ್ತಾನೆಂದು ಆ ದೇವತೆಗಳಿಗೆ ಹೇಳಿ ಎರಡೇ ವಾರಗಳೊಳಗೆ ಕಾಲೌಷಧಿಯನ್ನು ತಯಾರಿಸಿಬಿಡಿ" ಎಂದನು ರಾಜ.

"ಹಾಗೆ ಮಾಡಬೇಕಾದರೆ ಈ ಶಿಶುವನ್ನು ದೇವೇಂದ್ರನಿಗೆ ತೋರಿಸಿ ಅಪ್ಪಣೆ ಪಡೆಯಬೇಕು. ಎರಡೇ ವಾರಗಳಲ್ಲಿ ಕಾಲೌಷಧಿ ತಯಾರಿಸಲು ಸಾಧ್ಯವಾದರೂ, ಹನ್ನೆರಡು ವರ್ಷಗಳನ್ನು ಎರಡೇ ವರ್ಷಗಳಿಗೆ ತರಿಸಿಬಿಟ್ಟರೆ ಬೇಗನೇ ಮರಣ ಸಂಭವಿಸುವ ಭಯವುಂಟು. ತಾವು ಹುಟ್ಟಿ ಹನ್ನೆರಡು ವರ್ಷ ಕಳೆದ ಮೇಲೆ ತಾನೇ ಇಷ್ಟು ದೊಡ್ಡವರಾದಿರಿ? ತಾವು ತಮ್ಮ ಮಗಳನ್ನು ನಮ್ಮವಶಕ್ಕೆ ಕೊಟ್ಟು, ಹನ್ನೆರಡು ವರ್ಷ ಕಾದಿದ್ದರೆ ಸಾಕು. ಅಮೇಲೆ ನಾವು ಹೇಳಿದಂತೆ ನಡೆಯಲಿಲ್ಲವೆಂದು ತೋರಿದರೆ, ಆಗ ನಿಮಗೆ ತೋರುವ ಎಂತಹ ಭಯಂಕರ ಶಿಕ್ಷೆಯನ್ನಾದರೂ ವಿಧಿಸಿರಿ" ಎಂದನು ವೃದ್ಧ ವೈದ್ಯ. ರಾಜನು ರಾಣಿಯ ಕಡೆಗೆ ತಿರುಗಿ, "ಏನನ್ನುವಿ ಪ್ರಿಯೆ? ಈ ವೈದ್ಯರು ಶಿಶುವನ್ನು ದೇವೇಂದ್ರನಿಗೆ ತೋರಿಸಿ, ಕಾಲೌಷಧಿ ತಯಾರಿಸಿ ಚಿಕಿತ್ಸೆ ಮಾಡುತ್ತಾರಂತೆ. ಮಗುವನ್ನು ಅವರ ವಶಕ್ಕೆ ಕೊಡೋಣವೆ? ಅಲ್ಲ, ಈಗಲೇ ಅವರ ತಲೆ ಕಡಿಸಿಬಿಡಲೆ?" ಎಂದು ಕೇಳಿದನು.

"ಮಗುವನ್ನು ಅವರಿಗೆ ಕೊಟ್ಟು, ಹನ್ನೆರಡು ವರ್ಷ ಕಣ್ಣುಮುಚ್ಚಿ ಕೂಡೋಣ. ಮತ್ತೆ ತಲೆ ಕಡಿಸಲಿಕ್ಕೆ ಎಷ್ಟು ಹೊತ್ತು?" ಎಂದಳು.

ವೈದ್ಯರು ರಾಜನ ಶಿಶುವನ್ನು ತಮ್ಮೊಂದಿಗೆ ಎತ್ತಿಕೊಂಡು ಹೋದರು. ಅತಿಶ್ರದ್ಧೆಯಿಂದ ಬೆಳೆಸುತ್ತ, ವಿದ್ಯಾಬುದ್ಧಿಗಳನ್ನು ಕಲಿಸುತ್ತಾ ಒಳ್ಳೆಯ ಪ್ರಪಂಚ ಜ್ಞಾನ ಬರುವಂತೆಯೂ ಮಾಡಿದರು. ರಾಜಕುಮಾರಿ ಹನ್ನೆರಡು ವರ್ಷದ ಹುಡುಗಿಯಾಗಿ ಕಂಗೊಳಿಸಿದಳು. ವೈದ್ಯರು ಅವಳನ್ನು ರಾಜನ ಬಳಿಗೆ ಕರೆದೊಯ್ದು, "ಇದೋ ಪ್ರಭು, ತಮ್ಮ ಮಗಳ ಚಿಕಿತ್ಸೆ ಮುಗಿಯಿತು" ಎಂದರು.

ಅವಳ ಸೌಂದರ್ಯ, ತಲೆಗೂದಲ ರಾಶಿ, ಹಲ್ಲಿನ ಸಾಲುಗಳನ್ನು ನೋಡಿ ರಾಜನೂ ರಾಣಿಯೂ ಬಹಳ ಸಂತೋಷಪಟ್ಟು ವೈದ್ಯರಿಗೆ ಚೆನ್ನಾಗಿ ಬಹುಮಾನ ಕೊಟ್ಟರು.

ವೈದ್ಯರ ಪೋಷಣೆಯಲ್ಲಿ ಬೆಳೆದ ಅವಳಿಂದ ರಾಜ ಕುಟುಂಬದ ಮೂಢತ್ವವು ಮಾಯವಾಯಿತು.



## ಫೋಟೋ ಶೀರ್ಷಿಕೆಯ ಸ್ಪರ್ಧೆ  : :  ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೪ ನವೆಂಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



Devidas Kasbekar



M. Natarajan

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಸೆಪ್ಟೆಂಬರ್ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲುಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಆದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

### ಜೂಲೈ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಅಕ್ಕನ ಕೈ ಕೆಲಸ ಮಾಡುತ್ತಾ ಇರುತ್ತೆ

ಎರಡನೇ ಫೋಟೋ : ತಂಗಿಯ ಕೈಗೆ ಕಾಳು ಬರುತ್ತಾ ಇರುತ್ತೆ

ಕಳುಹಿಸಿದವರು : ಕೆ. ಬಿ. ಪುಷ್ಪಾವತಿ, ಕಡೂರು, ಕರ್ನಾಟಕ.

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ಶರಾವತಿ ನದಿಯ ಮೇಲಿರುವ ಜೋಗ್ ಜಲಪಾತ. ೨. ಹರಿದ್ವಾರ. ೩. ಸಬರ್ಮತಿ. ೪. ಮಧ್ಯಪ್ರದೇಶ್. ೫. ಕಲಕತ್ತಾದಲ್ಲಿ.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.




## ೧೬

[ಪಿಂಗಳನು ಹಸನ್‌ಗೋರಿಯೊಂದಿಗೆ ಕೂಡಿ, ಕೋಟೆಯ ಬಾಗಿಲನ್ನು ತೆರೆಯಲು ಹೋಗಲು, ಮರುಭೂಮಿಯ ಕಳ್ಳರು ಬಾಗಿಲ ಹಿಂದೆ ಸೇರಿಸಿಟ್ಟಿದ್ದ ಸಿಡಿಮದ್ದುಗಳು ಸಿಡಿದು ಕೆಲವು ಸೈನಿಕರು ಗಾಯಗೊಂಡರು. ತರುವಾಯ ಕಳ್ಳರ ನಾಯಕ ಹೆಗ್ಗಡೇಗೆ ಬೆಟ್ಟಗಳಲ್ಲಿರುವುದು ಕಂಡಿತು. ಅಲ್ಲಿ ಭಯಂಕರ ಯುದ್ಧ ನಡೆಯಿತು. ಅದೇ ಸಮಯದಲ್ಲಿ ಪಿಂಗಳನಿಗೆ ಆಕಸ್ಮಾತ್ತಾಗಿ ಪದ್ಮಪಾದನು ಅಲ್ಲಿ ಕಾಣಿಸಿದನು.]

ಮಹಾ ಮಾಂತ್ರಿಕನಾದ ಪದ್ಮಪಾದನನ್ನು ಇನ್ನು ಈ ಜನ್ಮದಲ್ಲಿ ನೋಡುವೆನೆಂದು ಪಿಂಗಳನು ಯೋಚಿಸಿರಲಿಲ್ಲ. ಒಂದು ವೇಳೆ ಇದು ಭ್ರಮೆಯಾಗಿರಬಹುದೇನೋ ಎಂದು ಕಣ್ಣುಗಳನ್ನು ತಿಕ್ಕಿ ತಿಕ್ಕಿ ಬಿಡಿಸಿದನು. ಕಿವಿಗಳನ್ನು ತೀಡಿ ತೀಡಿ ಗಮನಿಸಿದನು. ಹೌದು. ಅದು ಪದ್ಮಪಾದನದೇ ಆಕೃತಿ! ಅವನದೇ ಕಂಠಸ್ವರ! ಆಕಸ್ಮಾತ್ತಾಗಿ ಅವನು ಇಲ್ಲಿಗೆ ಹೇಗೆ ಬಂದನು? ಎಲ್ಲಿಯ ಅವಂತೀ ನಗರ! ಅದಕ್ಕೆ ಸಾವಿರಾರು ಮೈಲು ದೂರದಲ್ಲಿ ಎಲ್ಲಿಯ ಈ ಮರುಭೂಮಿ ಪ್ರದೇಶ! ಅದೂ ಈ ಮರುಭೂಮಿಯ ಕಳ್ಳರಿರುವ ಬೆಟ್ಟಗಳ ನಡುವೆ ಅವನ ದರ್ಶನ! "ಮಹಾ ಮಾಂತ್ರಿಕನಾದ ಪದ್ಮಪಾದನು ನನಗೆ ಬಂದ ಕಷ್ಟವನ್ನು ತನ್ನ ಮಂತ್ರಶಕ್ತಿಯಿಂದಲೇ ತಿಳಿದು ತನ್ನನ್ನು ಹುಡುಕಿ ಹಿಡಿದು ಕಾಪಾಡಲು ಬಂದಿರಬೇಕು. ಅವನಿಗೆ ನಿಜಕ್ಕೂ ನನ್ನ ಮೇಲೆ ಅಷ್ಟು ಅಭಿಮಾನವಿದೆ" ಎಂದುಕೊಂಡನು ಪಿಂಗಳ.

ಪಿಂಗಳನಿಗಾದ ಆಶ್ಚರ್ಯಕ್ಕೆ ಮೇರೆಯೇ ಇರಲಿಲ್ಲ. ಇದ್ದಕ್ಕಿದ್ದ ಹಾಗೆ ಅವನ ಆಶ್ಚರ್ಯವು ಅನುಮಾನಕ್ಕೆ ತಿರುಗಿತು. ಒಂದು ವೇಳೆ ಪದ್ಮಪಾದನೇ ಹೆಗ್ಗಡೇಗೆಯಾಗಿರಬಹುದೆ? ಅಂತಹ ಘೋರ ಕಾರ್ಯವನ್ನು



ಪದ್ಮಪಾದನು ಮಾಡುವನೆ ? ಹಾಗೆ ನೆನೆಯುವುದೇ ಅಸಹನೀಯವೆನಿಸಿತು ಪಿಂಗಳನಿಗೆ. ಅವನು ತನ್ನ ಪಕ್ಕದಲ್ಲಿರುವ ಹಸನ್‌ಗೋರಿಯನ್ನು ನೋಡಿದನು.

ಹಸನ್‌ಗೋರಿಯ ಮುಖದಲ್ಲಿಯೂ ಅನುಮಾನ ಇರುವುದು ಸ್ಪಷ್ಟವಾಗಿ ಗೋಚರಿಸಿತು. ಅವನು ಪಿಂಗಳನ ತೋಳು ಹಿಡಿದು ತನ್ನ ಕಡೆಗೆ ಎಳೆದು, "ಏನು ಪಿಂಗಳಾ ! ಯಾರು ಈ ಪದ್ಮಪಾದ ? ಮರುಭೂಮಿಯ ಕಳ್ಳರ ನಾಯಕ ಹೆಗ್ಗಡೇಗೆ ಇವನೇನಾ ? ಗೊತ್ತೇ ನಿನಗೆ ಇವನನ್ನು ? ನಿನ್ನ ಆತಂಕ ನೋಡುವಾಗ ನಿನಗೆ ತುಂಬ ಪರಿಚಿತನಾದವನೇ ಈ ಕಳ್ಳರ ನಾಯಕನಾಗಿದ್ದು, ಅವನ ವಿಷಯ ಹೇಳಲು ಹೀಜರಿಯುವ ಹಾಗಿದೆ. ನಿಜ ತಾನೆ ? " ಎಂದು ಪಿಸುದನಿಯಿಂದ ಕೇಳಿದನು.

ಪಿಂಗಳನು ಏನು ಹೇಳಬೇಕೆಂದು ಆಲೋಚನೆ ಮಾಡುತ್ತಿರಲು, ಪದ್ಮಪಾದನು ಸಮೀಪಕ್ಕೆ ಬಂದನು. ಅವನು ಪಿಂಗಳನಿಗೆ ಹಸನ್‌ಗೋರಿಯನ್ನು ತೋರಿಸುತ್ತ, "ಪಿಂಗಳಾ ! ಇವರು ಯಾರು ? ದೊಡ್ಡ ರಾಜಕೀಯದವರ ಹಾಗೆ ಕಾಣುತ್ತಾರೆ. ನಿನಗೂ ಇವರಿಗೂ ಏನು ಸಂಬಂಧ ? " ಎಂದು ಪ್ರಶ್ನಿಸಿದನು.

ಆ ಪ್ರಶ್ನೆಯಿಂದ ಪಿಂಗಳನು ಇನ್ನಷ್ಟು ತಳಮಳಿಸಿದನು. ಪದ್ಮಪಾದನು ಪಿಂಗಳನ ಮನಸ್ಸಿನ ಹೊಯ್ದಾಟವನ್ನು ಕಂಡುಹಿಡಿದು, ಮುಗುಳುನಗುವನ್ನು ಸೂಸಿ, "ಓಹೋ ! ಪಿಂಗಳಾ ! ನೀನು ನನ್ನ ಮೇಲೆ ಏನೋ ಸಂಶಯಪಡುವ ಹಾಗಿದೆ. ಅದು ನಿನಗೆ ನಂಬಲಾಗದಷ್ಟು, ಬಾಯಿಯಿಂದ ಹೇಳಲಾಗದಷ್ಟು ಕೆಟ್ಟ ರೀತಿಯ ಸಂಶಯವಾಗಿದೆ. ನಿಜ ತಾನೇ ? " ಎಂದು ಕೇಳಿದನು.

ಏನು ಉತ್ತರ ಕೊಡಬೇಕೆಂದು ಪಿಂಗಳನಿಗೆ ತೋರಲಿಲ್ಲ. ಅವನು ಹಸನ್‌ಗೋರಿಯನ್ನು ಮತ್ತೆ ನೋಡತೊಡಗಿದನು. ಆಗ ಹಸನ್‌ಗೋರಿ ಪದ್ಮಪಾದನ ಕಡೆಗೆ ಒಂದಡಿ ಮುಂದಿಟ್ಟು, "ಅಯ್ಯಾ, ತಾವು ಯಾರೆಂದು ನನಗೆ ಗೊತ್ತಿಲ್ಲ. ನನ್ನ ಪರಿಚಿತನಾದ ಈ ಪಿಂಗಳನನ್ನು ನೀವು ಗುರುತಿಸಿದ್ದೀರಿ. ಮರುಭೂಮಿಯ ಕೊಳ್ಳೇಗಾರರನ್ನು ಹುಡುಕುವಾಗ ನೀವು ಬಯಲಿಗೆ ಬಂದಿದ್ದೀರಿ. ಪುಣ್ಯ ಯಾತ್ರಿಕರಂತೆ ಕಾಣುತ್ತಿದ್ದೀರಿ. ಇದು..." ಎಂದಷ್ಟೇ ಹೇಳಿ, ಪದ್ಮಪಾದನು ನಕ್ಕುದನ್ನು ನೋಡಿ ಮಾತು ಅಲ್ಲೇ ನಿಲ್ಲಿಸಿ ಪರೀಕ್ಷಿಸಿ ನೋಡತೊಡಗಿದನು.

ಪದ್ಮಪಾದನು ಪಿಂಗಳನ ಭುಜಗಳನ್ನು ಆಪ್ಯಾಯತೆಯಿಂದ ತಟ್ಟುತ್ತ, "ಪಿಂಗಳಾ, ನಿನ್ನ ಹಾಗೆ ನನಗೂ ಈ ಸ್ಥಳದಲ್ಲಿ ನಿನ್ನನ್ನು ನೋಡಿ ಆಶ್ಚರ್ಯವಾಗಿದೆ. ಈಗ ಈ ಬೆಟ್ಟಗಳ ಕಡೆಯಿಂದ ಓಡಿಹೋದ ಕಳ್ಳರಿಗೆಲ್ಲ ನಾನೇ ನಾಯಕನೆಂದು ನಿಮಗಿಬ್ಬರಿಗೂ ಅನುಮಾನವಾಗಿರುವುದೇನು ? ಹಾಗಾಗುವುದು ಸಹಜವೇ ಅನ್ನು. ಪರವಾಗಿಲ್ಲ. ನೊಂದುಕೊಳ್ಳಲಾರೆ, ಹೇಳು" ಎಂದು ಹೇಳಿದನು.

"ಇಲ್ಲ ಪದ್ಮಪಾದರೇ ! ಹಾಳು ಸಂಶಯಗಳಿಗೆ

ಮಣ್ಣು ಹಾಕಿಬಿಟ್ಟೆ. ನೀವು ಇಂಥಾ ಹೀನವಾದ ಕಾರ್ಯಕ್ಕೆ ಇಳಿಯುವವರಲ್ಲವೆಂದು ನನಗೆ ಚೆನ್ನಾಗಿ ಗೊತ್ತಿದೆ " ಎಂದು ಪಿಂಗಳನು ಹಸನ್‌ಗೋರಿಯನ್ನು ನಿರ್ದೇಶಿಸುತ್ತ, " ಇವರಿಗೆ ಅಂತಹ ಸಂದೇಹ ಬಂದರೂ ಬಂದಿರಬಹುದು. ಇವರು ನವಾಬರ ಒಂಟೆ ಪಟಲಾಮಿನ ನಾಯಕರಾದ ಹಸನ್‌ಗೋರಿ. ಹೆಗ್ಗಡೇಗೆ ಎಂಬ ಮರುಭೂಮಿಯ ಕಳ್ಳರ ತಂಡದವರನ್ನು ಶೋಧಿಸಿಕೊಂಡು ಇವರು ಬಂದಿದ್ದಾರೆ. ಬಹಳ ಕಾಲದಿಂದ ಆ ಘೋರ ಕ್ರೂರ ಕರ್ಮಿಗಳನ್ನು ಹಿಡಿಯಲು ಹೆಣಗಾಡುತ್ತಿದ್ದಾರೆ. ಅಂಥವರ ಎಡೆಯಲ್ಲಿ ನೀವು ಹೇಗೆ ಸೇರಿದಿರಪ್ಪಾ ಅಂತ ಆಶ್ಚರ್ಯ, ಅಷ್ಟೇ " ಎಂದನು.

ಅದನ್ನು ಕೇಳಿ ಪದ್ಮಪಾದನು ಹಸನ್‌ಗೋರಿಯ ಕಡೆಗೆ ತಿರುಗಿ, " ಅಯ್ಯಾ, ನೀವು ಮರುಭೂಮಿಯ ರಕ್ಷಕಭಟರ ನಾಯಕರಾದರೆ, ನೀವು ಕಾಪಾಡಬೇಕಾದ ಕೆಲವು ವರ್ತಕರು ಅಲ್ಲಿ ಕಾಣುವ ಗುಹೆಯೊಳಗೆ ಆ ಕಳ್ಳರಿಂದ ಬಂಧಿಸಲ್ಪಟ್ಟಿದ್ದಾರೆ. ಅತ್ಯಂತ ಶರೀರ ಸಂಕಟದಲ್ಲಿ ನರಳಿಕೊಂಡಿದ್ದಾರೆ. ಮೊದಲು ಅವರನ್ನು ಕಾಪಾಡಬೇಕು " ಎಂದನು.

ಹಸನ್‌ಗೋರಿಗೆ ಪದ್ಮಪಾದನ ಮೇಲೆ ಇನ್ನೂ ಪೂರ್ತಿ ನಂಬುಗೆಯಾಗಲಿಲ್ಲ. ಹಸನ್‌ಗೋರಿ ಯೋಚಿಸುವುದನ್ನು ನೋಡಿ ಪಿಂಗಳನು, " ಹಸನ್ ಅವರೇ, ನೀವು ಈ ಪದ್ಮಪಾದರನ್ನು ನನ್ನ ಹತ್ತಿರ ಬಿಟ್ಟುಬಿಡಿರಿ. ಏನೂ ಹೆದರಬೇಕಾದ ಅಗತ್ಯವಿಲ್ಲ. ಇವರು ನನ್ನ ಆತ್ಮೀಯರಾಗಿದ್ದಾರೆ. ಇವರಿಂದ ಸರ್ವಸ್ವವನ್ನೂ ನಾನು ವಿಚಾರಿಸಿ ತಿಳಿಯುತ್ತೇನೆ. ಒಂದು ವೇಳೆ ಇವರೇ ಕಳ್ಳರ ನಾಯಕ ಹೆಗ್ಗಡೇಗೆಯೇ ಆಗಿದ್ದರೆ ಇವರ ಕೈಕಾಲುಗಳನ್ನು ಕಟ್ಟಿ ನಿಮಗೆ ಒಪ್ಪಿಸಿಬಿಡುತ್ತೇನೆ " ಎಂದನು.

ತನ್ನ ನಡತೆಗಳಿಂದ ವಿಶ್ವಾಸಪಾತ್ರನಾದ ಪಿಂಗಳನು ಹೇಳಿದ ಮಾತು ಕೇಳಿ ಹಸನ್‌ಗೋರಿಯ ಅನುಮಾನವೆಲ್ಲಾ ಹಾರಿಹೋಯಿತು. ಅವನು ಕೆಲವು ಮಂದಿ ಸೈನಿಕರನ್ನು ಕರೆದುಕೊಂಡು ಅವಸರದ ಆಜ್ಞೆ ಮಾಡಿ, ಪದ್ಮಪಾದನು ತೋರಿಸಿದ ಬೆಟ್ಟದ ಗುಹೆಯ ಕಡೆಗೆ ಹೊರಟುಹೋದನು.



" ಇದೇನು ಪಿಂಗಳಾ ! ದೇಶವಲ್ಲದ ದೇಶದಲ್ಲಿ ಈ ಒಣ ಮರಳುಗಾಡಿನಲ್ಲಿ, ಈ ಪಾಳು ಬೆಟ್ಟಗಳ ಹತ್ತಿರ ನಿನ್ನನ್ನು ನೋಡುತ್ತಿರುವೆನಲ್ಲಾ ! ದೊಡ್ಡ ಮಾತ್ಯ ಭಕ್ತನಾದ ನೀನು ಅವಂತೀ ನಗರದಲ್ಲಿರುವ ನಿನ್ನ ಸ್ವಂತ ಮನೆಯನ್ನು ಬಿಟ್ಟು, ತಾಯಿಯನ್ನು ಬಿಟ್ಟು ಇಷ್ಟು ದೂರಕ್ಕೆ ಯಾವ ಕಾರಣಕ್ಕಾಗಿ ಬಂದೆಯಪ್ಪಾ? ಏನು ಸಂಭವಿಸಿತು ? ನಿನ್ನ ತಾಯಿ ಕ್ಷೇಮವಾಗಿದ್ದಾಳೆ ತಾನೆ ? " ಎಂದು ಪದ್ಮಪಾದನು ಪ್ರಶ್ನಿಸಿದನು.

" ಅಯ್ಯಾ ಪದ್ಮಪಾದರೇ ! ನನ್ನ ತಾಯಿ ಕ್ಷೇಮವಾಗಿಯೇ ಇರಬಹುದು. ಆಕೆಗೆ ಏನೂ ಆಗದಿರಲಿ. ನನ್ನದು ಅತ್ಯಂತ ದೀನಾತಿದೀನವಾದ ಕಥೆಯಾಯಿತು.




ಇದಕ್ಕೆಲ್ಲಾ ನನ್ನ ಒಳ್ಳೆಯತನವೇ ಕಾರಣ. ನೀವು ಕೊಟ್ಟ ಮಹಿಮೆಯ ಚೀಲವನ್ನೂ, ಧನರಾಶಿಯನ್ನೂ, ಕಡೆಗೆ ಸಹಾಯಕನಾಗಿದ್ದ ಭಲ್ಲೂಕಕೇತುವನ್ನೂ ಸಹ ಕಳೆದುಕೊಂಡುಬಿಟ್ಟೆನು. ಎಷ್ಟು ತಲೆಯೊಡೆದುಕೊಂಡರೂ ನನ್ನ ಮರಮಂಡೆಗೆ ಭಲ್ಲೂಕಕೇತು ಮಂತ್ರ ನೆನಪಿಗೆ ಬರಲಿಲ್ಲ. ಈ ಎಲ್ಲಾ ಕಷ್ಟನಷ್ಟಗಳಿಗೂ, ಬಹು ದುಷ್ಟರಾದ ತುಚ್ಛ ಗುಣದ ನನ್ನ ಅಣ್ಣಂದಿರೇ ಕಾರಣ. ಅಂದು ನಾನು ನಿಮ್ಮಿಂದ ಅಪ್ಪಣೆ ಪಡೆದುಕೊಂಡು ನನ್ನ ಸ್ವಂತ ಮನೆಗೆ ಹೋದಂದಿನಿಂದ ಈವರೆಗೂ ನಾನು ಅನುಭವಿಸಿದ ಯಾತನೆಗಳನ್ನೆಲ್ಲ ಹೇಳಬೇಕಾದರೆ ಬಹಳ ಕಾಲ ಬೇಕಾಗುತ್ತದೆ. ದಿಕ್ಕಿಲ್ಲದ ಈ ಸ್ಥಳದಲ್ಲಿ ನಾನು ಜೀವದೊಂದಿಗೆ ಇರುವುದೇ ಒಂದು ಆಶ್ಚರ್ಯ. ಬಹುಶಃ ನನ್ನ ಆಯುಷ್ಯ ಗಟ್ಟಿ ಇದ್ದಿರಬೇಕು. ಅದಿರಲಿ ಅಯ್ಯಾ, ಮೊದಲು ನೀವು ಈ ಪ್ರಾಂತಕ್ಕೆ ಬರಲು ಏನು ಕಾರಣವೋ ಹೇಳಿರಿ. ಮತ್ತೊಬ್ಬ ಮಾಂತ್ರಿಕನು ನಿಮಗೆ ಗಂಟುಬಿದ್ದಿಲ್ಲವಷ್ಟೆ? ಒಂದು ವೇಳೆ ಅವನನ್ನು ಜಯಿಸಲಿಕ್ಕಾಗಿ ನೀವು ಬಂದಿದ್ದರೆ ನಾನು ಮತ್ತೆ ನಿಮಗೆ ಸಹಾಯ ಮಾಡುತ್ತೇನೆ. ನಿಮ್ಮ ಕೆಲಸ ಮಾಡುವುದೆಂದರೆ ನನಗೆ ಪ್ರತ್ಯೇಕ ಸಂತೋಷ" ಎಂದನು ಪಿಂಗಳ.

ಪಿಂಗಳನು ಹೇಳಿದ ಕಡೆಯ ಮಾತಿನಿಂದ ಪದ್ಮಪಾದನಿಗೆ ಬಹಳ ಸಂತೋಷವಾಯಿತು. ಆದರೆ ತಾನು ಅವನಿಗೆ ಕೊಟ್ಟ ಧನವನ್ನೂ ಮಹತ್ವದ ಚೀಲವನ್ನೂ ಕಳೆದುಕೊಂಡಿರುವನೆಂಬುದನ್ನು ತಿಳಿದು ಬಹಳ ಬೇಸರಗೊಂಡನು. ಭಲ್ಲೂಕ ಪರ್ವತಗಳ ಹತ್ತಿರ ಮಹಾಮಾಯನನ್ನು ಜಯಿಸುವುದರಲ್ಲಿ ಪಿಂಗಳನು ತೋರಿಸಿದ ಧೈರ್ಯವೂ, ಮಾಡಿದ ಸಹಾಯವೂ ಬಹಳ ದೊಡ್ಡದೇ. ಪದ್ಮಪಾದನು ಅದನ್ನೆಂದೂ ಮರೆಯಲಿಲ್ಲ.

"ಪಿಂಗಳಾ, ನಾನು ಯಾವ ಮಾಂತ್ರಿಕನನ್ನೂ ಜಯಿಸಲಿಕ್ಕಾಗಿ ಈ ಪ್ರಾಂತಕ್ಕೆ ಬರಲಿಲ್ಲ. ಮಹಾಮಾಯನ ಸಮಾಧಿಯಿಂದ ನಾವು ಸಂಪಾದಿಸಿದ ಅಪೂರ್ವ ಶಕ್ತಿಯ ವಸ್ತುಗಳು ನನ್ನ ಹತ್ತಿರವಿರುವವರೆಗೆ ನಾನು ಪ್ರಪಂಚದಲ್ಲಿರುವ ಯಾರಿಗೂ ಹೆದರಬೇಕಾಗಿಲ್ಲ. ನಾನು ಕೇವಲ ದೇಶ ಸಂಚಾರ ಮಾಡುವುದಕ್ಕೂ, ವಿಶೇಷ ಯಾತ್ರಾಸ್ಥಳಗಳನ್ನು ಸಂದರ್ಶಿಲಿಕ್ಕೂ, ಸಾಧಾರಣ ಯಾತ್ರಿಕನ ವೇಷದಲ್ಲಿ ವಲಸೆ ಹೋಗುವ ವರ್ತಕರ ಜತೆಯಲ್ಲಿ ಕೂಡಿ ಈ ಪ್ರಾಂತಕ್ಕೆ ಬಂದೆನು. ಈ ದಿನ ಸಾಯಂಕಾಲದಲ್ಲಿ ಆ ವರ್ತಕರ ಮೇಲೆ ಕಳ್ಳರ ಗುಂಪು ದಾಳಿಮಾಡಿ, ಬೆಲೆ ಬಾಳುವ ಸಾಮಾನುಗಳನ್ನೆಲ್ಲಾ ಕೊಳ್ಳೆ ಹೊಡೆದರು. ವರ್ತಕರನ್ನೆಲ್ಲ ಅಲ್ಲಿ ಕಾಣುವ ಗುಹೆಯೊಳಗೆ ಬಂಧಿಸಿಟ್ಟಿದ್ದಾರೆ. ಅವರಲ್ಲಿ ಕೆಲವರು ಅವಂತೀ ನಗರವಾಸಿಗಳೂ ಇದ್ದಾರೆ. ನಿಜಕ್ಕೂ ಆ ಕಳ್ಳರು ಬಹಳ ಕ್ರೂರರು. ನರಮೃಗಗಳು" ಎಂದನು ಪದ್ಮಪಾದ.



ಅವನ ಮಾತು ಕೇಳಿ ಪಿಂಗಳನು ಆಶ್ಚರ್ಯ ಪಡುತ್ತ, ಪದ್ಮಪಾದನ ಮುಖವನ್ನು ಅನುಮಾನ ದಿಂದ ನೋಡುತ್ತ, "ಇದೇನು ಹೇಳುವಿರಿ ಪದ್ಮ ಪಾದರೇ ! ಮಹಾ ಮಾಂತ್ರಿಕರಾದ ನೀವು ಜತೆ ಯಲ್ಲಿದ್ದು ಕೂಡಾ ಕ್ರೂರರಾದ ಆ ಮರುಭೂಮಿಯ ಕಳ್ಳರು ವರ್ತಕರನ್ನು ದೋಚಿಕೊಳ್ಳಲು ಹೇಗೆ ಸಾಧ್ಯವಾಯಿತು ? ನೋಡುತ್ತಾ ನೀವು ಹೇಗೆ ಸುಮ್ಮನಿದ್ದಿರಿ ? ಬಹುಶಃ ಯಾವ ತಪ್ಪಿನಿಂದಾದರೂ ನಿಮ್ಮ ಅದ್ಭುತ ಮಂತ್ರಶಕ್ತಿಗಳನ್ನು ಕಳೆದುಕೊಂಡು ಬಿಡಲಿಲ್ಲವಷ್ಟೆ ? " ಎಂದು ಕೇಳಿದನು.

ಪದ್ಮಪಾದನು ಮುಗುಳುನಗುತ್ತ, "ಪಿಂಗಳಾ, ನಾನು ಆ ವರ್ತಕರ ಗುಂಪಿನೊಂದಿಗೆ ಹೊರಡು ವಾಗ ಯಾತ್ರಿಕನೆಂದಷ್ಟೇ ಹೇಳಿದ್ದೆನು. ನಾನೊಬ್ಬ ದೊಡ್ಡ ಮಾಂತ್ರಿಕನೆಂದು ಹೇಳಿದ್ದರೆ ನನ್ನನ್ನು ತಮ್ಮೊಂದಿಗೆ ಬರಲು ಅನುಮತಿ ಕೊಡುತ್ತಿದ್ದಿಲ್ಲ. ಆ ಕಾರಣದಿಂದಲೇ ಕಳ್ಳರು ಅವರ ಮೇಲೆ ಬೀಳು ವಾಗ, ನಾನು ಯಾರೆಂಬುದು ಹೊರಬೀಳದಂತೆ ನನ್ನ ಮಂತ್ರ ತಂತ್ರಗಳನ್ನು ತೋರ್ಪಡಿಸದೆ ಈ ಕಲ್ಲುಗಳಾಟಿಗೆ ತಪ್ಪಿಸಿಕೊಂಡೆನು. ಮನಸ್ಸು ಕಲ್ಲು ಮಾಡಿ ಕಳ್ಳರ ಕ್ರೂರ ಕರ್ಮಗಳನ್ನು ಸಹಿಸಿ ಕೊಂಡೆನು" ಎಂದನು.

"ಏನಾದರೂ ನಿಮ್ಮ ಪ್ರವರ್ತನೆ ನನಗಷ್ಟು ಹಿಡಿಸಲಿಲ್ಲ. ನಿಮ್ಮ ಹತ್ತಿರವಿರುವ ಅದ್ಭುತ ವಸ್ತು ಗಳಾದ ಭೂಗೋಳವೂ, ಉಂಗುರವೂ, ವಜ್ರಖಚಿತ ವಾದ ಕತ್ತಿಯೂ ಇಂತಹ ಸಂದರ್ಭದಲ್ಲಿ ಉಪ ಯೋಗವಿಲ್ಲದೆ ಹೋಗುವುದೆಂದರೇನು ? ನೀವು ನೋಡಬೇಕಾದ ಸ್ಥಳವನ್ನೆಲ್ಲಾ ಆ ಭೂಗೋಳದಲ್ಲೇ ನೋಡಿಬಿಡಬಹುದಿತ್ತು. ಹಾಗಿರುವಾಗ ದಾರಿಯ ಶ್ರಮವನ್ನೆಲ್ಲಾ ಮೈಮೇಲೆ ಹಾಕಿಕೊಂಡು ಈ ವರ್ತಕ ರೊಂದಿಗೆ ಹೊರಡುವ ಆಗತ್ಯವೇನಿತ್ತು ? ಅವರೆಲ್ಲರ ಹಾಗೆ ನೀವಾಗಿ ಕಷ್ಟಪಡಲು ಹೊರಡುವುದೆಂದ ರೇನು ? ಇಷ್ಟು ದೊಡ್ಡ ವೈರಾಗ್ಯ ಬರುವಷ್ಟು ನಿಮಗೇನಾಯಿತು ? " ಎಂದು ಕೇಳಿದನು ಪಿಂಗಳ.

"ಓಹೋ ! ಪಿಂಗಳಾ ! ಆ ಕಳ್ಳರ ನಾಯಕನಾದ ಹೆಗ್ಗಡೇಗೆ ನಾನೇ ಎಂದು ಇನ್ನೂ ನಿನಗೆ ಅನುಮಾನ ವಿದೆ, ಹೌದಾ ? " ಎಂದು ಪದ್ಮಪಾದನು ಪಿಂಗಳ ನನ್ನು ನೋಡಿ ನಕ್ಕು, "ಎಷ್ಟಾದರೂ ನಿನಗೆ ಲೋಕಾನುಭವ ಕಡಿಮೆಯೇ. ನಾನು ದೇಶಗಳನ್ನು ತಿರುಗುತ್ತ ಆಯಾ ಪುಣ್ಯಕ್ಷೇತ್ರಗಳನ್ನು ಸೇವಿಸಿದ ನಿಜವಾದ ಫಲವನ್ನು ಅನುಭವಿಸಬೇಕಾದರೆ ಎಲ್ಲರ ಹಾಗೆ ನಾನೂ ಪಾದಚಾರಿಯಾಗಿಯೇ ಹೋಗ ಬೇಕು. ಅದನ್ನು ಬಿಟ್ಟು ನನ್ನ ಹತ್ತಿರವಿರುವ ಅದ್ಭುತ ಶಕ್ತಿಗಳ ಸಹಾಯದಿಂದ ಎಲ್ಲೆಂದರಲ್ಲಿಗೆ ಕ್ಷಣಮಾತ್ರದಲ್ಲಿ ಹೋಗುವುದರಿಂದ ಯಾತ್ರೆಯ ಫಲವು ದಕ್ಕುವುದಿಲ್ಲ. ಎಲ್ಲರ ಹಾಗೆ ತಾನೂ ಒಬ್ಬ ನೆಂದುಕೊಳ್ಳುವುದರಲ್ಲೇ ದೊಡ್ಡತನವಿದೆಯಪ್ಪಾ. ಪ್ರಪಂಚದಲ್ಲಿ ಹುಟ್ಟಿದವನಿಗೆ ತಾನೊಬ್ಬ ಬೇರೆ

ಅನಿಸಿಕೊಂಡರೆ ಯಾವ ಸುಖವೂ ಇಲ್ಲವಪ್ಪಾ. ಈ ನೀತಿಯನ್ನು ನೀನೂ ತಿಳಿದಿರಬೇಕು." ಎಂದನು.

ಹೀಗೆ ಇವರು ಮಾತಾಡಿಕೊಳ್ಳುತ್ತಿರುವಾಗ, ಸ್ವಲ್ಪ ದೂರದಲ್ಲಿ ಹಸನ್‌ಗೋರಿಯ ಸೈನಿಕರ ಕೇಕೇಗಳೂ, ವರ್ತಕರ ದೀನಾಲಾಪಗಳೂ ಕಲಕಲರವವಾಗಿ ಸಮೀಪಿಸುತ್ತ ಕಿವಿಗಡಚಿಕ್ಕುವಷ್ಟು ಗೋಳಾಟವಾಯಿತು.

ಆದುದರಿಂದ ಪಿಂಗಳನೂ ಪದ್ಮಪಾದನೂ ತಮ್ಮ ಮಾತನ್ನು ಅಲ್ಲಿಗೆ ನಿಲ್ಲಿಸಿ, ಆ ಕಡೆಗೆ ಗಮನ ಹರಿಸಿದರು. ಹಸನ್‌ಗೋರಿ ವರ್ತಕರನ್ನೆಲ್ಲ ಆದರಿಸಿ ಅವರಿಗೆ ಧೈರ್ಯವನ್ನು ಹೇಳುತ್ತ ಕರೆದುಕೊಂಡು ಬರುತ್ತಿದ್ದನು.

ಅದೇ ಸಮಯದಲ್ಲಿ ಒಬ್ಬ ಸೈನಿಕನು ಓಡುತ್ತಾ ಪಿಂಗಳನ ಬಳಿಗೆ ಬಂದು, "ಹೆಗ್ಗಡೇಗೆ ಇಲ್ಲೆಲ್ಲೋ ಇರುವ ಹಾಗಿದೆ. ಗುಂಪಿನೊಂದಿಗೆ ಪರಾರಿಯಾಗುತ್ತಿದ್ದಾನೆ. ಅವರು ತಪ್ಪಿಸಿಕೊಂಡು ಹೋಗುವುದರೊಳಗೆ ಅವರನ್ನು ಹಿಡಿಯಲು ನಿಮ್ಮ ಸಹಾಯಬೇಕೆಂದು ಹಸನ್‌ಗೋರಿ ಸಾಹೇಬರು ಹೇಳಿದ್ದಾರೆ. ಬನ್ನಿ ! ಬನ್ನಿ !" ಎಂದು ಅವಸರಪಡಿಸಿದನು.

ಪಿಂಗಳನು ಪದ್ಮಪಾದನನ್ನು ಪ್ರಾರ್ಥಿಸುವಂತೆ ನೋಡುತ್ತ, "ಅಯ್ಯಾ, ಹಸನ್‌ಗೋರೀ ನನ್ನನ್ನು ಈ ಮರುಭೂಮಿಯಲ್ಲಿ ಒಣಗಿ ಸಾಯದಂತೆ ಕಾಪಾಡಿದ್ದಾರೆ. ಅದಕ್ಕೆ ಪ್ರತಿಯಾಗಿ ನಾನು ಅವರಿಗೆ ಏನಾದರೂ ಸಹಾಯ ಮಾಡಲೇಬೇಕು. ಈ ಕತ್ತಲೆಯಲ್ಲಿ ಆ ಮರುಭೂಮಿಯ ಕಳ್ಳರನ್ನು ಹಿಡಿಯುವುದು ಮಾನವ ಮಾತ್ರರಿಂದ ಆಗುವ ಕಾರ್ಯವಲ್ಲ. ಆ ಕಳ್ಳರೂ ಅವರ ನಾಯಕ ಹೆಗ್ಗಡೇಗೆಯೂ ಬಹು ಕ್ರೂರರು. ಸಮೀಪದಲ್ಲಿದ್ದ ಖಿಲ್ಲೆಯೊಳಗಿನ ಸೈನಿಕರನ್ನೆಲ್ಲಾ ಕೊಲೆಮಾಡಿ, ಕಪಟೋಪಾಯದಿಂದ ನಮ್ಮನ್ನೆಲ್ಲಾ ಕೊಲ್ಲಲು ನೋಡಿದ್ದಾರೆ. ಆದುದರಿಂದ ಈ ಮರುಭೂಮಿಯ ಕಳ್ಳರನ್ನು ಹಿಡಿಯುವ ಪ್ರಯತ್ನದಲ್ಲಿ ನಿಮ್ಮ ಅದ್ಭುತ ಶಕ್ತಿಗಳನ್ನು ಪ್ರಯೋಗಿಸಿ ಸಹಾಯ ಮಾಡಲೇಬೇಕು. ಈ ಕಳ್ಳರಿಂದ ನೀವೇ ಕಾಪಾಡಬೇಕು. ನನಗಾಗಿ ಸ್ವಲ್ಪ



ದಯಮಾಡಿ. ನಿಮ್ಮ ಉಪಕಾರವನ್ನು ಅವರು ಎಂದಿಗೂ ಮರೆಯಲಾರರು. ಇದೊಂದು ಲೋಕೋಪಕಾರವೂ ಆಗಿ ಹತ್ತು ಪುಣ್ಯಕ್ಷೇತ್ರಗಳ ಯಾತ್ರೆಯ ಪುಣ್ಯ ಬಂದೀತು !" ಎಂದನು.

"ಪಿಂಗಳಾ ! ನೀನು ಕೇಳಿಕೊಳ್ಳುವುದರಿಂದ ನಾನು ಸಹಾಯ ಮಾಡುತ್ತೇನೆ. ಆದರಿಂದ ನಾನು ಮಾಂತ್ರಿಕನೆಂದು ವರ್ತಕರಿಗೆಲ್ಲಾ ಗೊತ್ತಾಗಿ ಹೋಗುತ್ತದೆ. ಆಮೇಲೆ ಅವರೊಂದಿಗೆ ನಾನು ಪ್ರಯಾಣ ಮಾಡಲು ಸಾಧ್ಯವಾಗದು. ಏಕೆಂದರೆ ಅವರು ನನ್ನನ್ನು ಆಕಾಶಶಕ್ತಿ ಪೂಜಿಸಿ ಬ್ರಹ್ಮರಥವೆತ್ತುವುದು ನನಗೇನೂ ಇಷ್ಟವಿಲ್ಲ. ಸರಿ. ಯಾತ್ರಾಸ್ಥಳಗಳನ್ನು ಸಂದರ್ಶಿಸಲು ಎಷ್ಟೋ ಮಾರ್ಗಗಳಿವೆ !" ಎಂದು ಪದ್ಮಪಾದನು ಒಂದು ಕಲ್ಲನ್ನು ಹೆಕ್ಕಿ ಅದನ್ನು ತನ್ನ ಕತ್ತಿಯಿಂದ ಸಣ್ಣ ಸಣ್ಣ ತುಂಡುಗಳಾಗುವಂತೆ ಮಂತ್ರ ಗುಣುಗುತ್ತಾ ಒಡೆದನು.

ಪದ್ಮಪಾದನು ಮಾಡುವ ಕೆಲಸ ನೋಡಿ ಪಿಂಗಳನು ಸಂತೋಷದಿಂದುಕ್ಕಿ, "ಪದ್ಮಪಾದರೇ ! ಇದೇನು ಕೆಲಸವೋ ? ಅಲ್ಲಿ ಕಳ್ಳಕಾಕರು ವರ್ತಕರ ಸೊತ್ತು ಅಪಹರಿಸಿ ಓಡಿಹೋಗುತ್ತಿದ್ದರೆ, ನೀವು ಹೀಗೆ ಕುಳಿತು ಕಲ್ಲು ಒಡೆಯುವ ಆಟ ತೋರಿಸುತ್ತಿರುವಿರಿ ! ಏನಿದು ?" ಎಂದನು.

ಪದ್ಮಪಾದನು ನಗುತ್ತ ತನ್ನ ಕೈಯಲ್ಲಿರುವ ಕಲ್ಲಿನ ತುಂಡುಗಳನ್ನು ಪಿಂಗಳನಿಗೆ ತೋರಿಸುತ್ತ, "ಈ ಕತ್ತಲೆಯಲ್ಲಿ ಕಳ್ಳರನ್ನು ಬೆನ್ನಟ್ಟಿ ಹಿಡಿಯುವುದು ಆಗದ ಕೆಲಸವೆಂದು ನೀನೇ ಹೇಳಿದೆಯಷ್ಟೆ ? ಅದಕ್ಕೇ ಕತ್ತಲೆಯಲ್ಲಿ ನೋಡಬಲ್ಲಂತಹ ತೋಳಗಳನ್ನೂ ಹೆಬ್ಬುಲಿಗಳನ್ನೂ ಇಲ್ಲಿಗೆ ಬರುವಂತೆ ಮಾಡಲು ಕಳುಹಿಸುತ್ತೇನೆ. ಇವುಗಳಲ್ಲಿ ದೊಡ್ಡ ತುಂಡುಗಳು ಹೆಬ್ಬುಲಿಗಳು. ಚಿಕ್ಕ ಕಲ್ಲುಗಳು ತೋಳಗಳು !" ಎಂದು ಹೇಳಿ ಆ ಕಲ್ಲಿನ ತುಂಡುಗಳನ್ನು ಮಂತ್ರಿಸಿ ಎಲ್ಲಾ ದಿಕ್ಕುಗಳಿಗೂ ಬಲವಾಗಿ ಬೀಸಿ ಕತ್ತಲೆಯ ಕಡೆಗೆ ಒಗೆದನು.

ನೋಡುತ್ತಿದ್ದ ಹಾಗೆ ಆ ಕಲ್ಲುಗಳಿಂದ ಭೀಕರವಾಗಿ ಕೂಗುವ ತೋಳಗಳೂ ಹೆಬ್ಬುಲಿಗಳೂ



ಹೊರಟು ಬೆಟ್ಟದ ಬಂಡೆಗಳ ಮೇಲಿಂದ ಹಾರುತ್ತಾ, ಧುಮುಕುತ್ತಾ ಎಲ್ಲಾ ಕಡೆಗಳಿಗೂ ಓಡಿದುವು.

ಈ ಅದ್ಭುತ ದೃಶ್ಯವನ್ನು ನೋಡಿ ಪಿಂಗಳನು ನಿಶ್ಚೇಷ್ಟಿತನಾದನು. ಅವನು ನೋಡುತ್ತಿದ್ದ ಹಾಗೆ ಬೆಟ್ಟಗಳ ಗುಹೆಯ ಕಡೆಯಿಂದ ಹಸನ್‌ಗೋರಿ ಬಿಡಿಸಿದ ವರ್ತಕರು ಗುಂಪುಗುಂಪಾಗಿ ಹೊರಟು ಪದ್ಮಪಾದನಿರುವ ಜಾಗೆಗೆ ಬಂದರು. ಅವರೊಂದಿಗಿದ್ದ ಹಸನ್‌ಗೋರಿ, ಕೈಗಳನ್ನು ಆಚೀಚೆ ಬೀಸುತ್ತ, ಓಡೋಡಿ ಬಂದು, "ಏನಿದು ಘೋರ! ಈ ಗುಡ್ಡಗಾಡು ಪ್ರಾಂತದಲ್ಲಿ ಈವರೆಗೂ ಒಂದೇ ಒಂದು ತೋಳವನ್ನೋ ಹುಲಿಯನ್ನೋ ನೋಡಿದ್ದಿಲ್ಲ. ಈಗ ಬಹಳ ವಿಚಿತ್ರ!" ಎಂದು ದೊಡ್ಡ ಕಣ್ಣುಗಳಿಂದ ಪಿಂಗಳನನ್ನು ನೋಡಿ ಸ್ತಂಭಿಸಿ ನಿಂತನು.

"ಪದ್ಮಪಾದರೇ! ಇನ್ನು ನಿಮ್ಮ ರಹಸ್ಯವನ್ನು ಅಡಗಿಸಿ ಪ್ರಯೋಜನವಿಲ್ಲ. ಹೇಳಿಬಿಡಲೇ?" ಎಂದನು ಪಿಂಗಳ.

ಪದ್ಮಪಾದನು ಒಪ್ಪಿಗೆ ಸೂಚಿಸುವಂತೆ ತಲೆಯಾಡಿಸಿದನು. ಅವನು ತನ್ನ ದುಸ್ತಿನೊಳಗೆ ಇಟ್ಟುಕೊಂಡಿದ್ದ ಮಹಾ ಮಾಯನ ಉಂಗುರವನ್ನು ಹೊರಕ್ಕೆ ತೆಗೆದು ಅಲ್ಲಿ ಎತ್ತರವಾಗಿದ್ದ ಒಂದು ಕಲ್ಲಿನ ಮೇಲೆ ಇಟ್ಟನು. ಮರುಕ್ಷಣದಲ್ಲಿ ಆ ಪ್ರದೇಶವೆಲ್ಲಾ ಕಣ್ಣು ಕೋರೈಸುವಂತಹ ಕಾಂತಿಯಿಂದ ಹಚ್ಚಹಗಲಿನ ಹಾಗೇ ಆಯಿತು. ಎಲ್ಲರಿಗೂ ಅತ್ಯಾಶ್ಚರ್ಯ! ಪಿಂಗಳನು ಒಂದೆರಡು ಮಾತುಗಳಲ್ಲಿ ಪದ್ಮಪಾದನು ಮಹಾ ಮಾಂತ್ರಿಕನೆಂಬುದನ್ನು ಅಲ್ಲಿ ಸೇರಿದವರೊಂದಿಗೆ ಹೇಳಿ, ಹಸನ್‌ಗೋರಿಯನ್ನು ನೋಡಿ, "ಹಸನ್‌ಗೋರಿಯವರೇ, ಆ ಮರುಭೂಮಿಯ ಕಳ್ಳ ಹೆಗ್ಗಡೇಗೆಯನ್ನು ಕುರಿತು ಇನ್ನೇನೂ ಚಿಂತಿಸಬೇಕಾದ ಅಗತ್ಯವಿಲ್ಲ. ಪದ್ಮಪಾದರು ಕಳುಹಿಸಿದ ಪಿಶಾಚಿ ತೋಳಗಳೂ, ಹುಲಿಗಳೂ ಅವನನ್ನು ಎಲ್ಲಾ ಅನುಚರರೊಂದಿಗೆ, ಸೊತ್ತುಗಳೊಂದಿಗೆ ಇಲ್ಲಿಗೆ ಬರಿಸುತ್ತವೆ, ನೋಡುತ್ತಿರಿ" ಎಂದನು.

ಪಿಂಗಳನ ಮಾತು ಪೂರ್ತಿಯಾಗುವ ಮೊದಲೇ ಆ ಬೆಟ್ಟಗಳ ಕಡೆಯಿಂದ ಹಾಹಾಕಾರಗಳು ಹೊರಟುವು. ತೋಳಗಳ ಕೂಗೂ, ಹುಲಿಗಳ ಗಾಂಧ್ರಿಕೆಗಳೂ, ಗರ್ಜನೆಗಳೂ ಕೇಳುತ್ತಲೇ ಇದ್ದುವು. ನೋಡುತ್ತಿದ್ದ ಹಾಗೆ ನೂರಾರು ಸಂಖ್ಯೆಯಲ್ಲಿದ್ದ ಮರುಭೂಮಿಯ ಕಳ್ಳರೆಲ್ಲಾ ಎಲ್ಲಾ ಕಡೆಗಳಿಂದಲೂ ತಮ್ಮನ್ನು ಆಕ್ರಮಿಸುವ ಕ್ರೂರ ಮೃಗಗಳಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತ, ಮೃಗಗಳಿಂದ ತಳ್ಳಲ್ಪಟ್ಟು ಪದ್ಮಪಾದನೂ ಪಿಂಗಳನೂ ಇರುವ ಕಡೆಗೇ ಬಂದು ಶರಣಾಗತರಾಗುವಂತೆ ಹೊರಳಿ ಬಿದ್ದು ಕೂಗುತ್ತಿದ್ದರು. —(ಇನ್ನೂ ಇದೆ)

